# ಆಕಾಶದಿಂದ ಇಳಿದವರು

(ಪತ್ತೇದಾರಿ ಕಾದಂಬರಿ)



ಚೈತನ್ಯ






ಶ್ರೀ ಪ್ರಶಾಂತ ಪ್ರಕಾಶನ
2397 (ಮಹಡಿ) 4 ಮುಖ್ಯ ರಸ್ತೆ
ವಿನಾಯಕ ನಗರ, ಜಯಲಕ್ಷ್ಮಿಪುರಂ
ಮೈಸೂರು– 570 012

AKASHADINDA ILIDAVARU (A detective navel) by
Chaitanya Published by Smt K. Sreedevi, Sri Prashanta
Prakashana 2397 (upstairs) IV Main, Vinayakanagar
Jayalaxmipuram Mysore-570 012.

First Edition
April 1981

Second Edition
September 1982



ಪ್ರಥಮ ಮುದ್ರಣ ಎಪ್ರಿಲ್ 1981

ದ್ವಿತೀಯ ಮುದ್ರಣ ಸೆಪ್ಟೆಂಬರ್ 1982

ಮುದ್ರಕರು :

ಶ್ರೀ ಮಲ್ಲಿಕಾರ್ಜುನ ಪ್ರಿಂಟರ್ಸ್, ಐ.ಐ.ಮೊಹಲ್ಲ, ಮೈಸೂರು-2

ಬೆಂಗಳೂರಿನ ಆಕಾಶದಲ್ಲಿ ಆ ರಾತ್ರಿ ಎರಡು ಚಿಕ್ಕ ಚುಕ್ಕಿಯಾಕಾರದ ಬಿಂದುಗಳು ರಾತ್ರಿಯಲ್ಲಿ ಓಲಾಡುತ್ತ ಮಿನುಗುತ್ತಿದ್ದುದು ಹೆಚ್ಚಿನ ಜನರ ಗಮನಕ್ಕೆ ಬಂದಿರಲಿಲ್ಲ. ನೋಡಿದ ಕೆಲವರು ಅದನ್ನು ಹೆಚ್ಚಾಗಿ ಗಮನಕ್ಕೆ ತಂದುಕೊಳ್ಳಲಿಲ್ಲ. ಸದಾ ಆಕಾಶವನ್ನು ವೀಕ್ಷಿಸುವ ಖಗೋಳಜ್ಞರಿಗೆ ಈ ಚುಕ್ಕೆಗಳು ಅಲ್ಲಿ ಇದ್ದವೆಂಬುದನ್ನು ಬಿಟ್ಟರೆ ಇನ್ನೇನೂ ಹೊಳೆಯಲಿಲ್ಲ. ಮಧ್ಯರಾತ್ರಿಯ ವರೆಗೆ ಕೊಂಚ ಕೊಂಚ ಮಿನುಗುತ್ತಿದ್ದ ಈ ಚುಕ್ಕೆಗಳು ಕ್ರಮೇಣ ಬೆಳೆಯುತ್ತ ಹೋಗಿ ನಕ್ಷತ್ರಗಳ ರೂಪತಾಳಿದವು. ನಂತರ ಧರೆಗೆ ಇಳಿಯಲು ಪ್ರಾರಂಭಿಸಿದವು. ಆ ಮಧ್ಯರಾತ್ರಿಯಲ್ಲಿ ಅವು ಇಳಿಯುತ್ತಿವೆಯೋ ಹೋಗುತ್ತಿವೆಯೋ, ಎಂದು ಯೋಚಿಸಲು ಹೆಚ್ಚಿನ ಜನ ಎಚ್ಚರವಾಗಿರಲಿಲ್ಲ. ಗಾಢ ನಿದ್ರೆಯಲ್ಲಿದ್ದರು ! ಚುಕ್ಕೆಗಳು ದೊಡ್ಡವಾಗುತ್ತ ಬಂದರೂ ಬೆಳಕು ಮಾತ್ರ ಕ್ರಮೇಣ ಕಡಿಮೆಯಾಗುತ್ತ ಬಂದು ನೋಡು ನೋಡುತ್ತಿದ್ದಂತೆ ನಂದಿಹೋದವು. ನೋಡುತ್ತಿದ್ದ ಹಲವರು ನಕ್ಷತ್ರಗಳು ಬಿದ್ದವು ಎಂದು ಕೊಂಡು ಸುಮ್ಮನಾದರು ಆದರೆ ಉರಿದುಹೋಗುವ ನಕ್ಷತ್ರಗಳಂತೆ ಕಾಣ ಲಿಲ್ಲವಲ್ಲ ಎಂದು ಅವರು ಯೋಚಿಸಲಿಲ್ಲ.

ನಂದಿದ ಚುಕ್ಕೆಗಳು ಕಪ್ಪು ಆಕೃತಿಗಳಲ್ಲಿ ನೆಲಕ್ಕಿಳಿಯಲು ಪ್ರಾರಂಭಿಸಿದ್ದವು. ಬೆಂಗಳೂರಿನ ಕಬ್ಬನ್ ಪಾರ್ಕ್ ಬಳಿಯ ಭವ್ಯವಾದ ಬಂಗಲೆಯ ಕಂಪೌಂಡ್ ಹೊರಗೆ ಅವರು ನಿಧಾನವಾಗಿ ನೆಲ ಮುಟ್ಟಿದ್ದನ್ನು ಆ ಕತ್ತಲಲ್ಲಿ ಯಾರೂ ಗಮನಿಸಲಿಲ್ಲ. ಮನೆಯ ವಾಚ್‌ಮನ್ ರುದ್ರಯ್ಯ ಗೊರಕೆ ಹೊಡೆಯುತ್ತ ಹೊರಗೆ ಮಲಗಿದ್ದ. ಮನೆಯ ಹೊರಗೆ ಮಿ. ಗುರುವತ್ಸನ್ ಮತ್ತು ಮಿಸೆಸ್ ಶಾಂತಲಾ ವತ್ಸನ್ ಎಂದು ನಾಮ ಫಲಕಗಳಿದ್ದವು. ಆಗುಂತಕರು ಮನೆಯ ಗೇಟಿಗೆ ಹಾಕಿದ್ದ ಬೀಗವನ್ನು ತೆರೆದು ಒಳಗೆ ಪ್ರವೇಶಿಸಿದರು. ಮನೆಯ ಹೊರಗಡೆಯ ದೀಪವೊಂದನ್ನು ಬಿಟ್ಟರೆ, ಮನೆಯ ಒಳಗಡೆ ಯಾವ ದೀಪವೂ ಕಾಣುತ್ತಿರಲಿಲ್ಲ.

ವಾಚಮನ್ ರುದ್ರಯ್ಯನನ್ನು ಅವರು ನಿಧಾನಕ್ಕೆ ಎಬ್ಬಿಸಿದರು. ರುದ್ರಯ್ಯ ಕಣ್ಣು ತಿಕ್ಕಿಕೊಳ್ಳುತ್ತ ‘ ಓಹೋ ಬುದ್ಧಿಯವರು ! ’ ಎಂದು ಎದ್ದು, ‘ ಏನು ? ಈ ಸಲ ಬಾಳ ದಿನಕ್ಕೆ ಬಂದುಬಿಟ್ಟಿದಿರಿ ’ ಎಂದ.

' ಅದಿರಲಿ. ನಾವು ಇಲ್ಲದಾಗ ಹೆಚ್ಚಿನದೇನೂ ನಡೆದಿಲ್ಲ ತಾನೇ ? ' ಎಂದು ಕೇಳಿದರು ವತ್ಸನ್.

' ಏನೂ ನಡೆದಿಲ್ಲ ಬುದ್ಧಿ, ಆರು ತಿಂಗಳ ಹಿಂದೆ ನೀವು ಹೋದಾಗಿನಿಂದ ಒಬ್ಬರೂ ನಿಮ್ಮನ್ನ ಕೇಳಿಕೊಂಡು ಬಂದಿಲ್ಲ. ಒಂದು ಕಾಗದಾನೂ ಬಂದಿಲ್ಲ '.

' ಸರಿ ನೀನು ಇನ್ನು ಮಲಗಿಕೊ. ನಾಳೆ ಬೆಳಿಗ್ಗೆ ಮಾತನಾಡೋಣ' ಇಷ್ಟರಲ್ಲಿ ಶಾಂತಲಾ ವತ್ಸನ್ ಬಾಗಿಲನ್ನು ತೆರೆದಿದ್ದರು.

ವತ್ಸನ್ ದಂಪತಿಗಳು ಮನೆಯನ್ನು ಪ್ರವೇಶಿಸಿದರು. ಮನೆ ಬಹಳ ವಿಶಾಲವಾಗಿತ್ತು. ಹೋದೊಡನೆ ದೊಡ್ಡದೊಂದು ಹಜಾರ. ಅದಕ್ಕೆ ಹೊಂದಿಕೊಂಡೇ ಐದು ದೊಡ್ಡ ದೊಡ್ಡ ಕೋಣೆಗಳು, ಆ ಹಜಾರವನ್ನು ದಾಟಿದ ಮೇಲೆ ದೊಡ್ಡದೊಂದು ಊಟದ ಮನೆ ನಂತರ ಮಾಮೂಲಾಗಿ ಅಡಿಗೆ ಮನೆ, ಸ್ನಾನದ ಮನೆ, ಇತ್ಯಾದಿಗಳಿದ್ದವು. ಹಜಾರಕ್ಕೆ ಹೊಂದಿಕೊಂಡಿದ್ದ ಐದು ಕೋಣೆಗಳಲ್ಲಿ ಎರಡು ಕೋಣೆಗಳ ಬೀಗವನ್ನು ಮಾತ್ರ ವತ್ಸನ್ ತೆರೆದರು. ಉಳಿದ ಮೂರು ಕೋಣೆಗಳ ಬೀಗ ಹಾಗೆಯೇ ಇತ್ತು. ಆರು ತಿಂಗಳಿಂದ ಯಾರೂ ವಾಸವಾಗಿಲ್ಲ ಎನ್ನುವಂತೆ ಇರಲೇ ಇಲ್ಲ ಆ ಮನೆ. ಎಲ್ಲವೂ ತುಂಬ ನೀಟಾಗಿ, ಸ್ವಚ್ಛವಾಗಿ ಇತ್ತು. ಸೋಫಾಗಳ ಮೇಲೆ ಸ್ವಲ್ಪವೂ ಕೊಳೆ ಇರಲಿಲ್ಲ. ಬೇರೆ ಯಾರಾದರೂ ನೋಡಿದ್ದರೆ ಬಹಳ ಆಶ್ಚರ್ಯಪಡಬಹುದಾಗಿತ್ತು.

ವತ್ಸನ್ ದಂಪತಿಗಳು ಅಡಿಗೆ ಮನೆಯಲ್ಲಿ ಫ್ರಿಜ್ ತೆರೆದರು. ಅದೇ ಆಗ ಅಡಿಗೆ ಮಾಡಿಟ್ಟಂತ್ತಿದ್ದ ಊಟದ ವಸ್ತುಗಳು ಇದ್ದವು. ಹಣ್ಣುಗಳು ಸ್ವಲ್ಪವೂ ಬಾಡದೆ ತರಿತರಿಯಾಗಿದ್ದವು. ಊಟ ಮುಗಿಸಿ, ಹಣ್ಣು ತಿಂದು ವತ್ಸನ ದಂಪತಿಗಳು ಮಲಗಿದಾಗ ಬೆಳಗಿನಜಾವ ಮೂರು ಗಂಟೆಯಾಗಿತ್ತು.

೨

ರುದ್ರಯ್ಯನಿಗೆ ವತ್ಸನ ದಂಪತಿಗಳ ಜೀವನವೇ ಒಂದು ನಿಗೂಢವಾಗಿತ್ತು. ಆತ ಆ ಮನೆಯಲ್ಲಿ ಕೆಲಸಕ್ಕೆ ಸೇರಿ ಸುಮಾರು ಹತ್ತು

ವರುಷಗಳೇ ಸಂದಿದ್ದವು. ಈ ಹತ್ತು ವರುಷಗಳಲ್ಲಿ ಮನೆಯ ಮಾಲೀಕರು ಆಗೊಮ್ಮೆ ಈಗೊಮ್ಮೆ ಬರುವುದು, ಮತ್ತೆ ಹೊರಟು ಹೋಗುವುದು. ಅವರು ಬೊಂಬಾಯಿ ಕಡೆಯವರಿರಬಹುದು ಎಂದುಕೊಂಡಿದ್ದ ರುದ್ರಯ್ಯ. ಮನೆಯ ಮಾಲೀಕರು ಇರುವಾಗಲೂ ಹೆಚ್ಚು ಜನ ಮನೆಗೆ ಬರುತ್ತಲಿಲ್ಲ. ಅಪರೂಪಕ್ಕೆ ಆಗೊಮ್ಮೆ ಈಗೊಮ್ಮೆ ಯಾರೋ ಒಂದಿಬ್ಬರು ಬಂದು ಗಂಟೆ ಗಟ್ಟಲೆ ಹರಟೆ ಹೊಡೆದು ಹೋಗುತ್ತಿದ್ದರು. ಮನೆಯ ಯಜಮಾನರು ಊರಿನಿಂದ ಬರುವುದು ಯಾವಾಗಲೂ ರಾತ್ರಿಯ ಸಮಯದಲ್ಲಿಯೇ, ಮತ್ತು ಊರು ಬಿಡುವುದೂ ರಾತ್ರಿಯೆ. ರುದ್ರಯ್ಯ ಕಂಡ ಹಾಗೆ ರಾತ್ರಿ ಬಂದ ಯಜಮಾನರು ಬೆಳಿಗ್ಗೆ ಬಾಗಿಲು ತೆಗೆದೊಡನೆ ಒಳಗಿನ ಮನೆಯೆಲ್ಲ ತುಂಬಾ ಒಪ್ಪ ಓರಣವಾಗಿ ಕಾಣಿಸುತ್ತಿತ್ತು. ಜನರಯ್ಯ ಹಲವಾರು ಬಾರಿ ತನ್ನಲೇ ಯೋಚಿಸಿಕೊಂಡಿದ್ದ. ರಾತ್ರಿ ಅವರು ಮಲಗಿದ್ದನ್ನು ತಾನೇ ನೋಡಿರುವೆ. ಇನ್ನು ಮನೆಯನ್ನು ಇಷ್ಟು ಸ್ವಚ್ಛ ಮಾಡಿರುವವರು ಯಾರು ? ಈ ಪ್ರಶ್ನೆಗೆ ಉತ್ತರವಿನ್ನೂ ರುದ್ರಯ್ಯನಿಗೆ ಸಿಕ್ಕಿರಲಿಲ್ಲ.

ಇದೆಲ್ಲಕ್ಕಿಂತ ಒಂದು ಹೆಚ್ಚಿನ ಆಶ್ಚರ್ಯದ ಸಂಗತಿಯನ್ನು ರುದ್ರಯ್ಯ ಗಮನಿಸಿದ್ದ. ಅದೇನೆಂದರೆ ಹತ್ತು ವರ್ಷಗಳಲ್ಲಿ ವತ್ಸನ್ ದಂಪತಿಗಳು ಒಂದಿಷ್ಟೂ ಬದಲಾಗದಿರುವುದು. ಎಷ್ಟೇ ಶ್ರೀಮಂತರಿದ್ದರೂ, ವಯಸ್ಸಾದವರ ಹಾಗೆ ಅವರು ಏಕೆ ಕಾಣುವುದಿಲ್ಲ ಎಂದು ರುದ್ರಯ್ಯನಿಗೆ ದಿಗಿಲಾಗಿತ್ತು. ಈಗ್ಗೆ ಹತ್ತು ವರುಷಗಳ ಕೆಳಗೆ ಅದೇ ಹೊಸದಾಗಿ ಮದುವೆಯಾದವರ ಹಾಗೆ ಕಾಣುತ್ತಿದ್ದ ಆ ದಂಪತಿಗಳು ಈಗಲೂ ಹಾಗೆಯೇ ಇದ್ದರು. ಒಂದು ಕೂದಲು ಕೂಡ ಬೆಳ್ಳಗಾಗಿರಲಿಲ್ಲ.

ಇದೇ ಯೋಚನೆಯಲ್ಲಿ ರುದ್ರಯ್ಯ ಮರುದಿನ ಬೆಳಿಗ್ಗೆ ಆ ದೊಡ್ಡ ಮನೆಯ ಬಾಗಿಲಿಗೆ ಬಂದಾಗ ಹಾಲ್‌ನಲ್ಲಿ ಯಾರೂ ಇರಲಿಲ್ಲ. ಕೆಲ ಸಮಯದ ನಂತರ ಶಾಂತಲಾ, ಒಂದು ರೂಮಿನಿಂದ ಆಕಳಿಸುತ್ತ ಹೊರ ಬಂದು ರುದ್ರಯ್ಯ ಬಾಗಿಲಲ್ಲಿ ನಿಂತುದನ್ನು ಗಮನಿಸದೆ, ಅಲ್ಲಿಯೇ ಇದ್ದ ಸೋಫಾದ ಮೇಲೆ ಕುಳಿತುಕೊಂಡಳು. ಕೆಲ ಸಮಯದ ನಂತರ, ಗುರು ವತ್ಸನ್ ಅವರು ಇನ್ನೊಂದು ರೂಮಿನಿಂದ ಬಂದು ಅವಳೆದುರಿನ ಕುರ್ಚಿ ಯಲ್ಲಿ ಕುಳಿತರು. ರುದ್ರಯ್ಯನಿಗೆ ಆಶ್ಚರ್ಯವಾಯಿತು. ಗಂಡ-ಹೆಂಡರಿಬ್ಬರೂ

ನಿನ್ನೆ ತಾನೆ ಬಂದಿದ್ದಾರೆ. ಜಗಳವೇನೂ ಆಗಿಲ್ಲ. ಆದರೂ ಇಬ್ಬರೂ ಬೇರೆ ಬೇರೆ ತಾವ ಮಲಕ್ಕೋತಾರಂದ್ರೆ ! ರುದ್ರಯ್ಯನ ಯೋಚನೆಯಲ್ಲಿ ಈ ಸಮಸ್ಯೆ ಬಗೆಹರಿಯಲಿಲ್ಲ. ಇಷ್ಟರಲ್ಲಿ ರುದ್ರಯ್ಯನನ್ನು ಗಮನಿಸಿದ ಗುರು, ' ಏನು ರುದ್ರಯ್ಯ ' ? ಎಂದು ಕೇಳಿದರು.

' ಏನಿಲ್ಲ ಬುದ್ಧಿ, ಏನಾದ್ರೂ ಕೆಲಸ ಐತಾ ? '

' ಏನಿಲ್ಲ '

' ಆಲು, ತರಕಾರಿ ತರೋದಿದ್ರೆ....... '

' ಬೇಡ ಎಲ್ಲ ಇದೆ '

' ಊರಿಂದ ಬರುವಾಗ ತಕ್ಕೊಂಡೆ ಬಂದ್ರಿ ಅಂತ ಕಾಣ್ಸತ್ತೆ '

' ಹೂಂ '

ಗುರು ಮತ್ತು ಶಾಂತಲಾ ಯಾವಾಗಲೂ ಹಾಗೆಯೆ. ಮಾತು ತೀರ ಕಡಿಮೆ. ರುದ್ರಯ್ಯ ಮತ್ತೆ ತನ್ನ ಸ್ಥಳಕ್ಕೆ ಬಂದ. ಆದರೆ ನಿನ್ನೆ ರಾತ್ರಿ ಯಾವ ಚೀಲವನ್ನೂ ಹಿಡಿದು ಬಾರದಿದ್ದ ವತ್ಸನ್ ದಂಪತಿಗಳು ಹಾಲು ತರಕಾರಿ ಮನೆಯಲ್ಲಿದೆ ಎಂದು ಹೇಳಿದರಲ್ಲ ಎಂದು ರುದ್ರಯ್ಯನಿಗೆ ಮತ್ತಷ್ಟು ದಿಗಿಲಾಯಿತು.

ಇಷ್ಟರಲ್ಲಿ ಮನೆಯ ಮುಂದೆ ದೊಡ್ಡದೊಂದು ಬಿಳಿಯ ಕಾರು ಬಂದು ನಿಂತಿತು. ಅದರೊಳಗಿಂದ ರುದ್ರಯ್ಯ ಎಂದೂ ಕಾಣದಿದ್ದ ಎತ್ತರವಾದ ಬಿಳಿಯ ವ್ಯಕ್ತಿಯೊಂದು ಇಳಿಯಿತು. ನೇರವಾಗಿ ಮನೆಯನ್ನು ಪ್ರವೇಶಿಸಿದ ಆ ವ್ಯಕ್ತಿ ಹಾಲಿನಲ್ಲಿ ಕುಳಿತಿದ್ದ ಗುರು ವತ್ಸನ್‌ರ ಕೈ ಕುಲುಕಿತು. ಬಹಳ ದಿನಗಳಿಂದ ಪರಿಚಯವಿದ್ದವರಂತೆ ಅವರಿಬ್ಬರೂ ತೋರಿದರು.

ರುದ್ರಯ್ಯ ಅಲ್ಲಿ ಹೆಚ್ಚು ಹೊತ್ತು ಇರಲಾಗದೆ ಅಲ್ಲಿಂದ ಕದಲಿದ.

೩

ಒಳಗೆ ಪ್ರವೇಶಿಸಿದ ವ್ಯಕ್ತಿಯೇ ಮಾತಿಗೆ ಮೊದಲು ಪ್ರಾರಂಭಿಸಿತು.

' ನಿಮ್ಮ ಸೂಚನೆ ಸಿಕ್ಕೊಡನೆ ಇಲ್ಲಿಗೆ ಬಂದೆ. '

'ಸೂಚನೆ ಸರಿ. ಆದರೆ ಅಪೆಕ್ಸ ಗಾಮಾನ ಸುಳಿವೇನಾದರೂ ಸಿಕ್ಕಿತೆ ?' ಗುರು ಕೇಳಿದರು.

'ಇಲ್ಲ'

'ಏಕೆ ಎಂದು ಕೇಳಬಹುದೆ ?' ಶಾಂತಲಾ ವತ್ಸನ್ ಕೇಳಿದರು.

'ಇಲ್ಲಿ ಹುಡುಕುವುದೇ ಕಷ್ಟ. ಎಲ್ಲಿ ನೋಡಿದಲ್ಲ ಜನಗಳಿದ್ದಾರೆ'.

'ನೀನೆ ಹೀಗೆ ಹೇಳಿದರೆ ಹೇಗೆ ? ಅಪೆಕ್ಸಗಾಮಾನನ್ನು ಬಿಟ್ಟು ಈ ಸಲ ನಾವು ಹೊರಡುವ ಹಾಗೇ ಇಲ್ಲ', ಗುರು ತಮ್ಮ ಆತಂಕ ವ್ಯಕ್ತ ಪಡಿಸಿದರು.

'ಏನಾದರೂ ಮಾಡಲೇ ಬೇಕು ವೀರೇಂದ್ರ'

ವೀರೇಂದ್ರ ತನ್ನ ನೀಳವಾದ ಕೇಶರಾಶಿಯಲ್ಲಿ ಕೈಯಾಡಿಸುತ್ತ ಚಿಂತನೆ ಯಲ್ಲಿ ಮುಳುಗಿದ.

ಸ್ವಲ್ಪ ಸಮಯದ ಮೌನದ ನಂತರ ವಿರೇಂದ್ರ ಹೇಳಿದ,

'ಗಾಮಾನನ್ನು ನಾವು ಹುಡುಕಿಕೊಂಡು ಹೊರಡುವ ಬದಲು ಗಾಮಾನೇ ನಮ್ಮನ್ನು ಹುಡುಕಿಕೊಂಡು ಬರುವಂತೆ ಮಾಡಬಹುದು'.

'ಅದು ಹೇಗೆ ಸಾಧ್ಯ ? ಹತ್ತು ವರ್ಷಗಳಿಂದ ಈ ಪೃಥ್ವಿಯ ಜನ ರೊಡನೆ ಬೆರೆತು ಹೋಗಿರುವ ಗಾಮಾ ನಮ್ಮನ್ನು ಹುಡುಕಿಕೊಂಡು ಬರುವ ಸಾಧ್ಯತೆಯೇ ಇಲ್ಲ' ಗುರು ಭಾವಪೂರ್ಣವಾಗಿ ನುಡಿದರು.

'ಪ್ರಯತ್ನಿಸಿದರೆ ಹಾಗೂ ಮಾಡಬಹುದು' ವಿರೇಂದ್ರ ಎದ್ದು ನಿಂತು ಶತಪಥಿಸತೊಡಗಿದ.

'ಸ್ವಲ್ಪ ವಿಶದವಾಗಿ ಹೇಳಿ' ಶಾಂತಲಾವತ್ಸನ್ ಹೇಳಿದರು. ಅವರ ಧ್ವನಿಯಲ್ಲಿ ಆಜ್ಞೆಯ ಸೋಂಕು ಇತ್ತು.

'ಗಾಮಾನಿಗೆ ಈಗ ಭಾರತೀಯ ವಾಸ್ತುಶಿಲ್ಪ ಮತ್ತು ಪುರಾಣಗಳ ಬಗೆಗೆ ಆಸಕ್ತಿ ಹುಟ್ಟಿದೆ ಎಂದು ಕೇಳಿದ್ದೇನೆ. ಗಾಮಾ ನನಗೆ ಸಿಕ್ಕದಿದ್ದರೂ ಆತನ ಇತ್ತೀಚಿನ ಆಸಕ್ತಿಗಳ ಬಗ್ಗೆ ನನಗೆ ಸುಳಿವು ಸಿಕ್ಕಿದೆ'.

'ಸರಿ ಮುಂದೆ ?' ಗುರು ಉತ್ತರವಾಗಿ ನುಡಿದರು.

'ಭಾರತೀಯ ಶಿಲ್ಪ ಮತ್ತು ಪುರಾಣಗಳನ್ನು ದೀರ್ಘವಾಗಿ ಅಭ್ಯಸಿಸಿ ದವರೊಡನೆ, ನಿಕಟ ಸಂಪರ್ಕವನ್ನಿಟ್ಟುಕೊಳ್ಳಬೇಕು. ಮತ್ತು ನಾವು ಆ

See page No 10

ಬಂದ ತನ್ನ ಒಬ್ಬನೇ ಮಗನಾದ ಶಿವಯ್ಯನನ್ನು ಕೂಗಿದಳು. ಸುಮಾರು ಇಪ್ಪತ್ತೈದು ವರುಷದ ಯುವಕನೊಬ್ಬ ಒಳಗಿನಿಂದ ಓಡಿ ಬಂದ.

ಗಂಗಮ್ಮ ಅವನಿಗೆ 'ಅಯ್ಯಂಗೆ ಜ್ವರ ಬಂದೈತೆ' ಎಂದಳು.

ಅವನೂ ಮೈ ಮುಟ್ಟಿ ನೋಡಿದ. ಇಷ್ಟರಲ್ಲಿ ರುದ್ರಯ್ಯ ಕಣ್ಣು ಮುಚ್ಚಿ ಬಡಬಡಿಸುವುದಕ್ಕೆ ಪ್ರಾರಂಭಿಸಿದ. 'ಯಜಮಾನರು ಊರಿಂದ ಬಂದವ್ರೆ. ನಾನು ಈ ದಿನ ಕೆಲಸಕ್ಕೆ ಹೋಗೊಲ್ಲ ಅಂದರೆ.......' ಇದೇ ರೀತಿ ಅವನ ಬಡಬಡಿಕೆ ಮುಂದುವರೆಯಿತು. ಶಿವಯ್ಯ ಕೂಡಲೇ 'ನಾನು ಷಾಪಿಗೆ ಹೋಗಿ ಔಷಧಿ ತರ್ತೀನಿ' ಎಂದವನೇ ಹೊರ ನಡೆದ. ಔಷಧಿ ತಂದು ಕುಡಿಸಿದ ಮೇಲೆ ರುದ್ರಯ್ಯನ ಬಡ ಬಡಿಕೆ ಮತ್ತೆ ಮುಂದುವರಿಯಿತು. ತಡಿಯಲಾರದೆ ಶಿವಯ್ಯ 'ಅಯ್ಯೋ! ಅದಕ್ಯಾಕೆ ಅಷ್ಟು ಯೋಚ್ನೆ ಮಾಡ್ತಿ, ಈ ರಾತ್ರಿ ನಿಮ್ಮ ಯಜಮಾನರ ಮನೆತಾವ ನಾ ಹೋಕ್ತೀನಿ. ಮನಿಕ್ಕೊ ಸುಮ್ಮಗೆ' ಎಂದ.

ರುದ್ರಯ್ಯನ ಮನಸ್ಸು ಈಗ ಶಾಂತವಾಗಿ ಸುಖ ನಿದ್ರೆಯಲ್ಲಿ ತೊಡಗಿದ್ದ.

ಶಿವಯ್ಯ ಆ ರಾತ್ರಿ ಟಾರ್ಚು, ಕಂಬಳಿ, ಬಡಿಗೆ, ಇತ್ಯಾದಿಗಳನ್ನು ತೆಗೆದುಕೊಂಡು ಹೊರ ನಡೆದ. ಮೈಸೂರಿನಲ್ಲಿ ಗಾರೆ ಕೆಲಸವನ್ನು ಮಾಡುತ್ತಾ ಅದರಲ್ಲಿಯೇ ಪಳಗಿದ ಅವನಿಗೆ ಈ ವಾಚಮೆನ್ ಕೆಲಸ ಕೊಂಚ ಹೊಸ ಹುರುಪನ್ನು ನೀಡಿತ್ತು. ಆದರೆ ವಯಸ್ಸಿನಲ್ಲಿ ಇನ್ನೂ ಚಿಕ್ಕವನಾಗಿದ್ದ ಅವನಿಗೆ ಕತ್ತಲೆ, ದೆವ್ವ, ಭೂತ, ಇತ್ಯಾದಿಗಳ ಭಯ ಮಾತ್ರ ಬಿಟ್ಟಿರಲಿಲ್ಲ. ಮೊದ ಮೊದಲು ಧೈರ್ಯದಿಂದಲೇ ಹೊರಟ ಶಿವಯ್ಯ ವತ್ಸನ್‌ರವರ ಮನೆ ತಲುಪುವ ಹೊತ್ತಿಗೆ ಸಾಕಷ್ಟು ಗಾಬರಿಯಾಗಿದ್ದ.

ವತ್ಸನ್‌ರವರ ಮನೆ ತಲುಪಿದೊಡನೆ ಶಿವಯ್ಯ ಕಾಲಿಂಗ್ ಬೆಲ್ ಒತ್ತಿದ. ಶಾಂತಲಾ ವತ್ಸನ್ ಬಾಗಿಲು ತೆರೆದಳು. 'ನಮ್ಮ ಅಯ್ಯಂಗೆ ಹುಷಾರು ಇಲ್ಲ, ಅದಕ್ಕೆ ನನಗೆ ಕಳಿಸವ್ನೆ' ಎಂದು ಶಿವಯ್ಯ ದೀನನಾಗಿ ನಿಂತ.

'ಯಾರು ನೀನು ?' ಎಂದು ಶಾಂತಲಾ ವತ್ಸನ್ ಕೇಳಿದರು.

'ನಾನು ಶಿವಯ್ಯ ಅಮ್ಮನವರೆ'

'ಶಿವಯ್ಯ ಅಂದರೆ ?'

ಈಗ ಏನು ಉತ್ತರ ಹೇಳಬೇಕೆಂದು ಶಿವಯ್ಯನಿಗೆ ತೋರಲಿಲ್ಲ.

ಕೆಲಸವಾಯದನಂತರ ಯೋಚಿಸಿ ಶಾಂತಲಾ ವತ್ಸನ್ ಕೇಳಿದಳು, 'ನೀನು ರುದ್ರಯ್ಯನ ಮಗನ ?' ಈಗ ಶಿವಯ್ಯನಿಗೆ ಬೆಳಕು ಕಂಡಂತಾಗಿ 'ಹೌದು ಅಮ್ಮಾವರ, ರುದ್ರಯ್ಯನೇ ನನ್ನ ಅಯ್ಯ' ಎಂದ.

'ಸರಿ ಮಲಗಿಕೊ'

ಶಿವಯ್ಯ ಈಗಾಗಲೇ ಈ ಹೊಸ ವಾತಾವರಣ ಮತ್ತು ಜಾಗದ ಭಾರದಿಂದ ದಣಿದಿದ್ದ. ಹೊರಗೆ ಜಗುಲಿಯ ಮೇಲೆ ತನ್ನ ಕಂಬಳಿಯನ್ನು ಹಾಸಿಕೊಂಡು ಆಕಾಶದತ್ತ ನೋಡುತ್ತಾ ಮಲಗಿಕೊಂಡ. ಎಷ್ಟು ಹೊತ್ತಾದರೂ ಆತನಿಗೆ ನಿದ್ರೆಯೇ ಬರಲಿಲ್ಲ. ಒಳಗಿನ ದೀಪಗಳು ಕೂಡ ಎಷ್ಟು ಹೊತ್ತಾದರೂ ಆರಿರಲಿಲ್ಲ. ಆಗೀಗ ವಿಚಿತ್ರ ಶಬ್ದಗಳು ಮತ್ತು ಧ್ವನಿಗಳು ತೇಲಿ ಹೊರ ಬರುತ್ತಿದ್ದವು.

ಗಾಢ ನಿದ್ರೆಯಲ್ಲಿದ್ದ ಶಿವಯ್ಯನಿಗೆ ಎಚ್ಚರವಾದಂತಾಯಿತು. ಹೊರಗೆ ಗೂರ್ಖ ತನ್ನ ಬಡಿಗೆಯನ್ನು ನೆಲಕ್ಕೆ ಅಪ್ಪಳಿಸುತ್ತಾ ನಡೆದಿದ್ದ. ಕಾಂಪೌಂಡಿನ ಒಳಗಿದ್ದ ಮರಗಳ ಕೆಳಗೆ ಏನೋ ಸದ್ದಾದಂತೆ ಆಯಿತು. ಶಿವಯ್ಯ ಕೈಯಲ್ಲಿದ್ದ ಟಾರ್ಚಿನ ಗುಂಡಿಯನ್ನು ಅದುಮಿ ಕೈಯಲ್ಲಿ ಕೋಲನ್ನು ಎತ್ತಿಕೊಂಡು 'ಯಾರವರು' ಎನ್ನುತ್ತಾ ಆ ಕಡೆ ನಡೆದ. ಆ ಭಾಗದಲ್ಲಿ ಇದ್ದ ಮನೆಯ ಕಿಟಕಿ ಪೂರ್ತಿಯಾಗಿ ತೆರೆದುಕೊಂಡಿತ್ತು. ಒಳಗೆ ಬೆಳಕಿರದಿದ್ದರಿಂದ ಸಂಪೂರ್ಣ ಕತ್ತಲು ಆವರಿಸಿಕೊಂಡಿತ್ತು. ಮರಗಳ ಕೆಳಗೆ ಟಾರ್ಚನ್ನು ಬಿಡುತ್ತಾ ಎಲ್ಲವನ್ನು ಶೋಧಿಸಿದ. ತನ್ನ ಸ್ಥಾನಕ್ಕೆ ಮರಳಿ ಮಲಗಬೇಕೆಂದು ಹೊರಟಿದ್ದವನು ಕಿಟಕಿಯಲ್ಲೊಮ್ಮೆ ಇಣುಕಿದ. ಆತನನ್ನು ದಿಗ್‌ಭ್ರಾಂತನನ್ನಾಗಿ ಮಾಡುವ ದೃಶ್ಯವೊಂದು ಆತನ ಕಣ್ಣಿಗೆ ಬಿತ್ತು.

ಆ ರೂಮನ್ನು ಬೆಳಕಿನ ರೂಪದಲ್ಲಿದ್ದ ಎರಡು ಮನುಷ್ಯ ಆಕೃತಿಗಳು ಪ್ರವೇಶಿಸಿದವು. ಗೋಡೆಯಲ್ಲಿದ್ದ ಗುಂಡಿಯನ್ನು ಒತ್ತಿದೊಡನೆ ಗೋಡೆ ಇಬ್ಭಾಗವಾಯಿತು. ಆ ಗೋಡೆಯ ಹಿಂಬದಿಯಲ್ಲಿ ಹಲವಾರು ಯಂತ್ರಗಳು ಗೋಚರಿಸಿದವು. ಶಿವಯ್ಯ ಏನು ನಡೆಯುತ್ತಿದೆ ಎಂದು ತಿಳಿಯುವ ಮೊದಲೆ ಗಾಬರಿಯಿಂದ ಮಾತನ್ನು ಕಳೆದುಕೊಂಡಿದ್ದ. ಹಿಂದೆ ಹಿಂದೆ ಸರಿಯುತ್ತ ನಡೆದ ಶಿವಯ್ಯ ಗೇಟನ್ನು ತಲುಪಿದೊಡನೆ 'ಅಯ್ಯೋ ದೆವ್ವ' ಎಂದು ಕಿರುಚಿಕೊಳ್ಳುತ್ತಾ ಪ್ರಾಣಭಯದಿಂದ ತತ್ತರಿಸಿ ಬೀದಿಯಲ್ಲಿ ಓಡತೊಡಗಿದ.

ಬೆದರಿಸುವ ಪ್ರಯತ್ನಗಳು ನಡೆದಿವೆ ಎಂಬ ಸುಳಿವು ಗಾಮಾನಿಗೆ ಗೊ
ಯಿತು. ಆಗಲೇ ಆತನ ದೇಹದಲ್ಲಿದ್ದ ರಾಡಾರು ವಿರುದ್ಧ ದಿಶೆಯಲ್ಲಿ
ಮಾಡುವಂತೆ ಆತನು ಮಾಡಿದ್ದ. ಗುರು ಮತ್ತು ಶಾಂತಾರು, ಲಜ್ಜ
ಸಾರ ಕೆಲಸ ಮಾಡುವ ಶ್ರಮ ಜೀವಿಗಳಾಗಿದ್ದರು. ಆದರೆ ಗಾಮಾ ಮ
ಅದ್ಭುತ ಕಲ್ಪನೆಯನ್ನು ಹೊಂದಿದ ವಿಜ್ಞಾನಿಯಾಗಿದ್ದ. ಈ ಅಂ
ಆತನು ತನ್ನ ಲೋಕವನ್ನು ಮರೆತು, ಭಾರತೀಯ ಜನ ಜೀವನದಲ್ಲಿ ಬೆ
ವಂತೆ ಮಾಡಿತ್ತು. ಹೀಗಾಗಿ ಗುರು ಮತ್ತು ಶಾಂತಾರಿಗೆ ಗಾಮಾನ
ಹಿಡಿಯುವುದು ಸಾಧ್ಯವಾಗಿರಲಿಲ್ಲ. ತಮ್ಮ ಅಸಹಾಯ ಕತೆಯನ್ನು ಸೂಚಿ
ಶಾಂತಾ ಮತ್ತು ಗುರು ಕೆಲವು ವರುಷಗಳಾದ ನಂತರ ತಮ್ಮ ಲೋ
ತೆರಳಿದರು. ಕೂಡಲೇ ವೀರೇಂದ್ರನನ್ನು ಭೂಮಿಗೆ ಕಳುಹಿಸಲಾಯಿ
ಆದರೆ ವೀರೇಂದ್ರ ತರಬೇತಾದ ಬೇಹುಗಾರ ಮಾತ್ರನಾಗಿದ್ದ. ಭೂಮಿ
ಒಂದು ವರುಷ ಗಾಮಾನ ಲೋಕದ ಕೇವಲ ಮೂರು ತಿಂಗಳುಗಳು ಮಾ
ವಾಗುತ್ತಿದ್ದವು. ಹೀಗಾಗಿ ವೀರೇಂದ್ರನ ಆಗಮನದ ಕೆಲವು ವರುಷ
ನಂತರ ಗುರು ಮತ್ತು ಶಾಂತಾರನ್ನು ಮತ್ತೆ ಭೂಮಿಗೆ ಕಳುಹಿಸಲಾಯಿ
ವೀರೇಂದ್ರ ತನ್ನ ಕೆಲಸದಲ್ಲಿ ಸಫಲತೆಯನ್ನು ಪಡೆಯುವ ಸಾಧ್ಯತೆಗಳು
ಬರುತ್ತ ಕಡಿಮೆಯಾಗತೊಡಗಿದ್ದವು.

ಈಗ ಗಾಮಾನನ್ನು ಹುಡುಕಲು ಒಬ್ಬರ ಸ್ಥಾನದಲ್ಲಿ ಮೂವರು
ದ್ದರು. ಈ ಮೂವರಿಗೂ ಮಾನವರಿಗಿಂತ ಹೆಚ್ಚಾದ ಕೆಲವು ವಿಶೇಷ
ಗಳಿದ್ದವು. ಮುಖ್ಯವಾಗಿ ಅವರಿಗೆ ದೇಹವೇ ಇರಲಿಲ್ಲ. ಅಂದರೆ ಮಾ
ನಿಗೆ ಕಾಣಬಹುದಾದ ದೇಹವಿರಲಿಲ್ಲ. ಅವರು ಚೈತನ್ಯಸ್ವರೂಪಿಗ
ಅವರದೇ ಆದ ಲೋಕವಿದ್ದು ಅವರು ಮಾನವನಿಗಿಂತ ಮುಂದುವರೆದವರ
ದ್ದರೂ ಇಡೀ ವಿಶ್ವದ ಸ್ವರೂಪ ಅವರಿಗಿನ್ನೂ ತಿಳಿದಿರಲಿಲ್ಲ. ದೇವರ ಅಸ್ತಿತ್ವ
ಕಲ್ಪನೆ ಅವರಲ್ಲಿ ಮಾನವನಿಗಿಂತ ಕೊಂಚ ಭಿನ್ನವಾಗಿತ್ತು. ದೇವರು ಅವ
ತಮಗಿಂತ ಹೆಚ್ಚಿನ ಶಕ್ತಿಯುಳ್ಳ ಶಕ್ತಿಸ್ವರೂಪನಾಗಿದ್ದ. ಮೂರ್ತಿ ಪೂ
ಅಲ್ಲಿ ಅವಕಾಶವೇ ಇರಲಿಲ್ಲ. ಏಕೆಂದರೆ, ಅವರಿಗೆ ತಮ್ಮದೇ ಮೂರ್ತಿ
ಕಲ್ಪನೆಯೇ ಇರಲಿಲ್ಲ. ಹೀಗಾಗಿ ಅವರಿಗೆ ದೇವರೂ ಕೂಡ ತಮ್ಮಂತೆ
ಬೆಳಕಿನ ಸ್ವರೂಪವೇ ಆಗಿದ್ದ.

ಗುರು, ಶಾಂತಲಾ ಮತ್ತು ವೀರೇಂದ್ರರು ಹೀಗಾಗಿ ಯಾವ ರೂಪವನ್ನಾದರೂ ಧಾರಣೆ ಮಾಡಬಲ್ಲ ಅಗಾಧಶಕ್ತಿಯನ್ನು ಪಡೆದಿದ್ದರು ಹೀಗಾಗಿ ಗಾಮಾನನನ್ನು ಹಿಡಿಯುವುದು ಅವರಿಗೆ ಸುಲಭ ಕೆಲಸವೆನ್ನಿಸಬಹುದು. ಆದರೆ ವಾಸ್ತವವಾಗಿ ಅದು ಸುಲಭವಾಗಿರಲಿಲ್ಲ. ಬೆಳಕಿನ ಸ್ವರೂಪಿಗಳಾದ ಇವರಲ್ಲಿ ನಮ್ಮ ಕಣ್ಣಿಗೆ ಕಾಣದಂಥ ಅಗೋಚರ ಅಣು ಯಂತ್ರಗಳನ್ನು ಜೋಡಿಸಲಾಗಿತ್ತು. ಇವುಗಳ ಸಹಾಯದಿಂದ ಅವರು ಒಬ್ಬರೊಬ್ಬರ ಇರವು ಮತ್ತು ದೂರವನ್ನು ಸರಿಯಾಗಿ ತಿಳಿದುಕೊಳ್ಳಬಲ್ಲ ಶಕ್ತಿಯನ್ನು ಹೊಂದಿದ್ದರು. ಗಾಮಾನ ಇರವನ್ನು ಪತ್ತೆಹಚ್ಚಬಲ್ಲವರಾದ ಇವರ ಇರವನ್ನು ಗಾಮಾನನು ಪತ್ತೆಹಚ್ಚಬಲ್ಲ ಸಾಮರ್ಥ್ಯವನ್ನು ಪಡೆದಿದ್ದ! ಹೀಗಾಗಿ ಈ ಗಾಮಾನನನ್ನು ಪತ್ತೇಹಚ್ಚುವ ಕೆಲಸ ಅಸಮಾನ ಹೋರಾಟವಾಗಿರದೆ ಹಲವಾರು ಅರ್ಥಗಳಲ್ಲಿ ಒಂದು ಸಮಾನ ಹೋರಾಟವೇ ಆಗಿತ್ತು.

೫

ಬೆಳಗ್ಗೆ ಹೋಗಿ ರುದ್ರಯ್ಯ ವಾಚಮನ್ ತನ್ನ ಮನೆಯಲ್ಲ ಮಲಗಿದ್ದ. ಸುಮಾರು ಹನ್ನೊಂದು ಗಂಟೆಯ ವೇಳೆಗೆ ಕಣ್ಣುಬಿಟ್ಟ. ಏಳುವಂತೆಯೇ ಮೈಕೈಗಳೆಲ್ಲ ನೋವಾಗಿದ್ದರ ಅನುಭವವಾಯಿತು. ಮೈಮುಟ್ಟಿ ನೋಡಿಕೊಂಡ. ಕಾದು ಕೆಂಡವಾಗಿತ್ತು. ಆತನ ಹೆಂಡತಿಯಾದ ಗಂಗಮ್ಮನನ್ನು ಕೂಗಿ

'ಬಾರೆ ಇಲ್ಲಿ' ಎಂದು ಕರೆದ.

ಬೆರಣಿಗಳನ್ನು ಮಾಡಲು ಸಗಣಿಯಲ್ಲಿ ಕೈ ಅದ್ದಿ ನಿಂತ ಗಂಗಮ್ಮ ಹಾಗೆಯೇ ಒಳಗೆ ಬಂದು

'ಏನಾಗೈತೆ ? ಅಷ್ಟ್ಯಾಕ ಕೂಗಿಕೊಂತಿರಿ ?' ಎಂದಳು.

'ತುಂಬಾ ಜ್ವರ ಬಂದೈತೆ'

'ಹೌದಾ ?' ಎಂದವಳೇ ಗಂಗಮ್ಮ ಕೈತೊಳೆದು ಬಂದು ಗಂಡನ ಹಣೆ ಮುಟ್ಟಿ ನೋಡಿದಳು. ಅವಳಿಗೆ ತುಂಬಾ ಗಾಬರಿಯಾಯಿತು. ರುದ್ರಯ್ಯನ ಮೈ ನಡುಗುತ್ತಿದ್ದುದು ಕೆಂಡದಂತಾಗಿತ್ತು. ಅದೇ ಬೆಳಗ್ಗೆ ಮೈಸೂರಿನಿಂದ

ವಿಷಯಗಳಲ್ಲಿ ನಿಪುಣರೆಂಬುವವರೆಂತ ಹೆರಡಬೇಕು.'

'ಆದರೆ ಅಂಥವರು ಭಾರತದಲ್ಲಿ ಬೇಕಾದಷ್ಟು ಜನರಿರಬಹುದು. ಅವ ರೆಲ್ಲರೊಡನೆ ಸಂಪರ್ಕ ಸಾಧ್ಯವೆ?' ಗುರು ಕೇಳಿದರು.

'ಗಾಮಾನು ಕರ್ನಾಟಕವನ್ನು ಬಿಟ್ಟು ಹೋಗಿಲ್ಲವೆಂದು ನಮ್ಮ ಮಾನವ ಗುರುತು ರಾಡಾರ್ ತೋರಿಸಿದೆ.'

'ರಾಡಾರ ಕೆಲಸ ಮಾಡುತ್ತಿದ್ದರೆ ಗಾಮಾ ಏಕೆ ಸಿಕ್ಕುತ್ತಿಲ್ಲ?' ಶಾಂತಾ ಸಿಡುಕಿನಿಂದಲೇ ಕೇಳಿದರು.

'ರಾಡಾರ ಕೆಲಸ ಮಾಡುತ್ತಿದೆ. ಆದರೆ ಗಾಮಾ ತನ್ನ ದಿಕ್ಕನ್ನು ತಪ್ಪು ತಪ್ಪಾಗಿ ತೋರಿಸುವಂತೆ ತನ್ನ ದೇಹದ ಯಂತ್ರವನ್ನು ಒದಲಿಸುತ್ತಾನೆ. ಹೀಗಾಗಿ ಒಟ್ಟು ಅವನ ನನ್ನು ನಡುವಿನ ಅಂತರ ಮಾತ್ರ ಗೊತ್ತಾಗುತ್ತಿದೆ.'

ಈಗ ಮತ್ತೆ ಮೌನ ಕವಿಯಿತು. ಮೂವರೂ ಮತ್ತೆ ಚಿಂತೆಯಲ್ಲಿ ಮುಳುಗಿದರು.

'ಹಾಗಾದರೆ, ನಾವು ಒಟ್ಟನಲ್ಲಿ ಭಾರತೀಯ ಶಿಲ್ಪ ಮತ್ತು ಪುರಾಣಗಳಲ್ಲಿ ಆಸಕ್ತಿ ಉಳ್ಳವರೊಡನೆ ಕೂಡಲೇ ಸಂಪರ್ಕ ಬೆಳಹಿಸಬೇಕೆಂದಾಯಿತು' ಎಂದು ಶಾಂತಲಾ ವತ್ಸನ್ ಮೌನವನ್ನು ಮುರಿದರು.

'ವೀರೇಂದ್ರ ಈ ಕೆಲಸದಲ್ಲಿ ನೀನು ಕೂಡಲೇ ತೊಡಗು' ಎಂದು ಗುರು ವತ್ಸನ್ ಆಜ್ಞಾಪಿಸಿದರು.

'ಹಾಗೆ ಆಗಲಿ' ಎಂದು ವೀರೇಂದ್ರ ಎದ್ದು ಹೊರಟ.

ಬಿಳಿಯ ಕಾರು ಹತ್ತಿ ವೀರೇಂದ್ರ ಹೊರಡುವುದನ್ನು ರುದ್ರಯ್ಯ ಕುತೂ ಹಲದಿಂದ ನೋಡುತ್ತ ನಿಂತಿದ್ದ.

೪

ಅಪೆಕ್ಸ ಗಾಮಾನನ್ನು ಕುರಿತು ಎಷ್ಟು ಹೇಳಿದರೂ ಕಡಿಮೆಯೆ. ಏಕೆಂದರೆ ನಮ್ಮ ಊಹೆ ಮತ್ತು ಕಲ್ಪನೆಯ ಸಾಮ್ರಾಜ್ಯವನ್ನು ಮೀರಿ ಆತನ ಒಟ್ಟು ಜೀವನದ ಇತಿಹಾಸ ಹರಡಿಕೊಳ್ಳುತ್ತದೆ. ಆತನೂ ಗುರು ಮತ್ತು ಶಾಂತಾರೊಡನೆ ಪೃಥ್ವಿಯ ಕಾಲಮಾನದ ಪ್ರಕಾರ ಹತ್ತು ವರುಷದ

ಹಿಂಪೆಯೇ ಭೂಮಿಗೆ ಇಳಿದವನು. ಉದ್ದೇಶ ಮಾತ್ರ ಭೂಮಿಯ ಉಗಮ ಮಾತ್ರ ವಿಕಾಸವನ್ನು ಕುರಿತು ಅಭ್ಯಸಿಸುವುದೇ ಆಗಿತ್ತು. ಗಾಮಾ, ಗುರು ಮತ್ತು ಶಾಂತಲಾ ಈ ವಿಷಯದಲ್ಲಿ ಪರಿಣಿತರೇ ಆಗಿದ್ದರು. ಬೇರೆ ಲೋಕ ವಾಸಿಗಳಾಗಿದ್ದ ಈ ಮೂವರೂ ತಮ್ಮ ಉದ್ದೇಶಗಳನ್ನು ಮರೆಯುವ ಸಾಧ್ಯತೆ ಕಡಿಮೆಯೇ ಇತ್ತು. ಅವರ ದೇಹರಚನೆ ಬೇರೆಯಾಗಿದ್ದರೂ, ಸಂದರ್ಭ ಕ್ಕನುಗುಣವಾಗಿ ಆಯಾ ಲೋಕದ ಜನರಂತೆ ದೇಹಧಾರಣೆ ಮಾಡುವ ಶಕ್ತಿ ಅವರ ಚೇತನಕ್ಕೆ ಇತ್ತು. ಹೀಗಾಗಿ ಈ ಮೂವರೂ ಭೂಮಿಯ ಜನರಂತೆ ದೇಹಧಾರಣೆ ಮಾಡಿ ಈ ಬೆಂಗಳೂರಿನಲ್ಲಿ ವಾಸಿಸತೊಡಗಿದರು. ನಿರಂತರ ವಾಗಿ ತಮ್ಮ ಲೋಕದೊಡನೆ ಸಂಪರ್ಕ ಕಲ್ಪಿಸಿಕೊಂಡಿದ್ದರು.

ಮೊದ ಮೊದಲು ಈ ಮೂವರ ಜೋಡಿ ಬಹು ಅನ್ಯೋನ್ಯವಾಗಿಯೇ ಕೆಲಸ ಪ್ರಾರಂಭಿಸಿತು. ಆದರೆ ಬರು ಬರುತ್ತ ಗಾಮಾ ಉಳಿದ ಇಬ್ಬರಿಗಿಂತ ಭಿನ್ನವಾಗುತ್ತ ನಡೆದ. ಭಾರತೀಯ ರೀತಿ ನೀತಿಗಳಲ್ಲಿ ಮತ್ತು ಜನಜೀವನ ದಲ್ಲಿ ಗಾಮಾನ ಆಸಕ್ತಿ ಎಷ್ಟು ಕುದುರಿತೆಂದರೆ, ಆತನು ಪೃಥ್ವಿಯ ಉಗಮ ಕ್ಕಿಂತ ಹೆಚ್ಚಾಗಿ ಭಾರತೀಯನ ಉಗಮದ ಬಗ್ಗೆಯೇ ಹೆಚ್ಚು ಹೆಚ್ಚಾಗಿ ಆಸಕ್ತಿ ವಹಿಸತೊಡಗಿದ. ಶಾಂತಾ ಮತ್ತು ಗುರು, ಹಲವಾರು ಸಲ ಗಾಮಾನನ್ನು ಈ ಕುರಿತು ಎಚ್ಚರಿಸಿದರು. ಆದರೆ ಆ ವೇಳೆಗಾಗಲೇ ಗಾಮಾ ಸಂಪೂರ್ಣ ಭಾರತೀಯನಾಗಿ ಹೋಗಿದ್ದ. ಹಲವಾರು ಧ್ಯಾನ-ಯೋಗಗಳ ರೀತಿ ನೀತಿ ಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡು ಬೇರೆ ಸಾಕ್ಷಾತ್ಕಾರದ ಅಭ್ಯಾಸ ದಲ್ಲಿಯೇ ಗಾಮಾ ತೊಡಗಿದ್ದ.

ಗಾಮಾನ ಜೀವನದ ಈ ರೀತಿ, ಗುರು ಮತ್ತು ಶಾಂತಾರಲ್ಲಿ ಆತಂಕವನ್ನು ಮೂಡಿಸಿತು. ಗಾಮಾನಿಗೆ ಆತನ ಲೋಕದಿಂದ, ಜೀವನದ ರೀತಿಯನ್ನು ಬದಲಿಸಲು ಸಂಜ್ಞೆ ಮತ್ತು ಆಜ್ಞೆಗಳು ಬರತೊಡಗಿದವು. ಆದರೆ ಗಾಮಾ ಬೆಂಗಳೂರಿನ ಹುಡುಗಿಯೊಬ್ಬಳೊಡನೆ ದೈಹಿಕ ಸಂಪರ್ಕವನ್ನು ಕೂಡ ಹೊಂದಿ ದ್ದಾನೆಂದು ತಿಳಿದ ಮೇಲೆ, ಗಾಮಾನನ್ನು ಬಂಧಿಸಲು ಗುರು ಶಾಂತಾರಿಗೆ ಸೂಚನೆಗಳು ಬಂದವು. ಗಾಮಾನ ಲೋಕದಲ್ಲಿ ಬೇರೆ ಲೋಕದ ಹೆಣ್ಣಿ ನೊಡನೆ ಸಂಪರ್ಕ ಪಡೆಯುವುದು ಬಹು ದೊಡ್ಡ ಅಪರಾಧವೇ ಆಗಿತ್ತು. ತನ್ನನ್ನು ಯಾರೋ ಹಿಂಬಾಲಿಸುತ್ತಿದ್ದಾರೆ, ಮತ್ತು ತನ್ನ ಹುಡುಗಿಯನ್ನು

ವತ್ಸನ್‌ರವರ ಮನೆಯ ದೀಪಗಳೆಲ್ಲ ಪಕ್ಕನೆ ಬೆಳಗಿದವು.

5 ಪ್ರತಿಗಳು ಇರುವುದಿಲ್ಲ

ಒಡತ್ತಾ ನಡೆದ ಶಿವಯ್ಯ ಮನೆಯನ್ನು ತಲುಪಿದಾಗ ಆತ ಹೆಚ್ಚು ಕಡಿಮೆ ಪ್ರಜ್ಞಾಹೀನಸ್ಥಿತಿಯಲ್ಲಿಯೇ ಇದ್ದ. ರುದ್ರಯ್ಯನಿಗೆ ಮತ್ತು ಅವನ ಹೆಂಡತಿಗೆ ಮಗನ ಈ ಸ್ಥಿತಿಯ ಕಾರಣ ಕೂಡಲೇ ಗೊತ್ತಾಗುವಂತಿರಲಿಲ್ಲ. 'ಬೆಳಕು, ದೆವ್ವ' ಈ ಎರಡೇ ಶಬ್ದಗಳು ಶಿವಯ್ಯನ ಬಾಯಿಯಿಂದ ಹೊರಬರುತ್ತಿದ್ದವು. ಶಿವಯ್ಯನ ಈ ಸ್ಥಿತಿಯನ್ನು ಕಂಡು ಕೂಡಲೇ ವತ್ಸನ್‌ರ ಮನೆಗೆ ಹೋಗುವ ಸ್ಥಿತಿಯಲ್ಲಿ ರುದ್ರಯ್ಯ ಇರಲಿಲ್ಲ. ತಾಯಿಯೇ ಮಗನಿಗೆ ಕಷಾಯವನ್ನು ಮಾಡಿ ಕುಡಿಸಿದಳು. ಶಿವಯ್ಯನ ಮೈ ಕಾದ ಕೆಂಡವಾಗಿತ್ತು.

ಬೆಳಗಿನ ಜಾವ ಶಿವಯ್ಯನಿಗೆ ಕೊಂಚ ಪ್ರಜ್ಞೆ ಬಂದಂತಾಯಿತು. ಮಗನ ಅಸ್ತವ್ಯಸ್ತ ಮಾಹಿತಿಯಿಂದ ಅವನು ಹೇಳುತ್ತಿದ್ದುದು ರುದ್ರಯ್ಯನಿಗೆ ಸ್ವಲ್ಪ ಸ್ವಲ್ಪ ಅರ್ಥವಾಯಿತು. ತನ್ನ ಮಗ ದೆವ್ವವನ್ನು ಕಂಡು ಹೆದರಿಕೊಂಡಿದ್ದಾನೆ ಎಂದು ರುದ್ರಯ್ಯ ಭಾವಿಸಿದ. ಆದರೆ ಇಷ್ಟು ವರುಷ ಆ ಮನೆಯಲ್ಲಿ ಕೆಲಸ ಮಾಡಿದ ತನಗೆ ಕಾಣದಿದ್ದ ದೆವ್ವ ತನ್ನ ಮಗನಿಗೆ ಮಾತ್ರ ಹೇಗೆ ಕಂಡಿತು ಎಂದು ರುದ್ರಯ್ಯನಿಗೆ ವಿಸ್ಮಯವಾಯಿತು. ಆದರೂ ತನ್ನ ಆರೋಗ್ಯವಿಲ್ಲದ ದೇಹವನ್ನೇ ಹೊತ್ತುಕೊಂಡು ರುದ್ರಯ್ಯ ವತ್ಸನ್ ದಂಪತಿಗಳ ಮನೆಯತ್ತ ನಡೆದ. ರುದ್ರಯ್ಯ ಆ ಮನೆಯನ್ನು ತಲುಪಿದಾಗ ಮನೆಯ ಯಜಮಾನರು ಆಗಲೇ ಎದ್ದು ಕುಳಿತಿದ್ದರು. ಇಷ್ಟು ಬೇಗ ಯಾವತ್ತೂ ಏಳದ ಯಜಮಾನರು ಈ ದಿನ ರುದ್ರಯ್ಯನನ್ನೇ ಸ್ವಾಗತಿಸಿದ್ದು ರುದ್ರಯ್ಯನಿಗೆ ಆಶ್ಚರ್ಯವಾಯಿತು. ಶಾಂತಲಾ ವತ್ಸನ್ ರುದ್ರಯ್ಯನಿಗೆ ಕಾಫಿಯನ್ನು ಕೊಡುತ್ತಾ, 'ಏನು ರುದ್ರಯ್ಯ, ಹುಷಾರಾಗಿದ್ದೀಯ ?' ಎಂದು ಕೇಳಿದರು.

'ನಾನು ಹುಷಾರಾಗಿದ್ದೀನಿ ಕಣಮ್ಮ. ಆದರೆ ನನ್ನ ಮಗ........'

'ಅದೇ ರಾತ್ರಿ ಹೋಗಿ ಬಿಟ್ನಲ್ಲ, ಏಕೆ?' ಎಂದು ಗುರು ವತ್ಸನ್ ಕೇಳಿ ಶಾಂತಲಾ ಕಡೆ ನೋಡಿದರು. 'ಅದು ಯಾಕೆ ಬಂದ ಅಂತ ಗೊತ್ತಿಲ್ಲ ಬುದ್ಧಿ, ಆದರೆ ಹೆದರಿಕೊಂಡಾನೆ ಅಂತ ಕಾಣ್ಸುತ್ತೆ.'

Shomala

‘ ಹಾಗ, ? ಒಂದೆರಡು ದಿನ ಅವನನ್ನೂ ಕಳಿಸಬೇಡ, ನಿನಗೂ ಹುಷಾರು ಇಲ್ಲ ಅಂತೀಯಾ ’ ಎಂದು ಶಾಂತಲಾ ವತ್ಸನ್ ರುದ್ರಯ್ಯನಿಗೆ ಹತ್ತು ರೂಪಾಯಿ ಕೊಟ್ಟರು. ರುದ್ರಯ್ಯ ಮನೆಯ ಗೇಟನ್ನು ದಾಟುತ್ತಿದ್ದಂತೆಯೇ ವೀರೇಂದ್ರನ ಬಿಳಿಯ ಕಾರು ಮನೆಯನ್ನು ಪ್ರವೇಶಿಸಿತು. ವೀರೇಂದ್ರನಿಗೆ ಈಗಾಗಲೇ ರಾತ್ರಿ ನಡೆದ ಘಟನೆಯನ್ನು ಸಂಜ್ಞೆಗಳ ಮೂಲಕ ತಿಳಿಸಲಾಗಿತ್ತು.

‘ ಈಗ ಉಳಿದಿರುವುದೊಂದೇ ದಾರಿ. ಶಿವಯ್ಯನನ್ನು ಮುಗಿಸಬೇಕು. ಅವನು ಬಾಯಿಬಿಟ್ಟರೆ ನಾವು ನಮ್ಮ ಲೋಕಕ್ಕೆ ಮರಳುವುದು ಸಾಧ್ಯವಾಗಲಿಕ್ಕಿಲ್ಲ ’ ಎಂದ ವೀರೇಂದ್ರ.

ಈ ಮಾತನ್ನು ಕೇಳಿ ಶಾಂತಲಾ ವತ್ಸನ್‌ಗೆ ಹೆಚ್ಚು ಕೋಪ ಬಂದಿತು.

‘ ವೀರೇಂದ್ರ ನಿನ್ನ ಬೇಹುಗಾರಿಕೆಯ ಬುದ್ಧಿ ಇಲ್ಲಿ ಕೆಲಸಕ್ಕೆ ಬಾರದು. ಶಿವಯ್ಯನ ಕೊಲೆಯಾದೊಡನೆ ಕೊಲೆಗಾರನ ಪತ್ತೆ ಹಚ್ಚುವ ಕೆಲಸ ಪ್ರಾರಂಭವಾಗುತ್ತದೆ. ಆಗ ನಮ್ಮ ಸುಳಿವು ಇಲ್ಲಿಯವರಿಗೆ ಸಿಕ್ಕರೂ ಸಿಗಬಹುದು ’.

‘ ಹೌದು ವೀರೇಂದ್ರ ಅವಳು ಹೇಳುವುದರಲ್ಲಿ ಅರ್ಥವಿದೆ ’ ಎಂದರು ಗುರು.

‘ ಹಾಗಾದರೆ ಈಗ ಮಾಡುವುದು ಏನು ? ’ ಎಂದು ಕೇಳಿದ ವೀರೇಂದ್ರ.

‘ ಮಾಡುವುದು ಏನು ! ಶಿವಯ್ಯ ದೆವ್ವವನ್ನು ನೋಡಿದ್ದಾನೆಂದು ಎಲ್ಲರೂ ಭಾವಿಸುತ್ತಾರೆ. ನಾವು ಸುಮ್ಮನಿರುವುದೇ ಈಗ ಮೇಲು .’ ಎಂದಳು ಶಾಂತಲಾ.

ಗುರು ಮತ್ತು ವೀರೇಂದ್ರ ಅವಳ ಮಾತನ್ನು ಒಪ್ಪಿದರು.

೭

ಶಿವಯ್ಯ ಈ ಮೊದಲು ಮೈಸೂರಿನಲ್ಲಿ ಗಾರೆ ಕೆಲಸವನ್ನು ಮಾಡಿಕೊಂಡು ಇದ್ದ. ಸುಖದಿಂದ ಇದ್ದ ಮಗನನ್ನು ಸುಮ್ಮನೆ ಬೆಂಗಳೂರಿಗೆ

ಕರೆಯಿಸಿಕೊಂಡು ದುಃಖಕ್ಕೆ ತಳ್ಳಿದಂತೆ ಆಯಿತಲ್ಲಾ ಎಂದು ರುದ್ರಯ್ಯ ದುಃಖಿಸಿದ. ಆದರೆ ಮಗನು ವಾಸಿಯಾಗಿ ಹೊರಡಲು ಇನ್ನು ಕೆಲವು ದಿನಗಳು ಬೇಕು ಎಂಬ ಅರಿವು ರುದ್ರಯ್ಯನಿಗೆ ಇತ್ತು. ಇತ್ತ ಶಿವಯ್ಯನನ್ನು ಕೊಲ್ಲಬಾರದೆಂಬ ನಿರ್ಧಾರದಿಂದಾಗಿ ಶಾಂತಲಾ ಮತ್ತು ಗುರುಸಿಗೆ ತಮ್ಮ ಸ್ಥಿತಿಯ ಅರಿವನ್ನು ತಿಳಿದುಕೊಂಡ ಪೆದ್ದನೊಬ್ಬನ ಬಗ್ಗೆ ಹೆಚ್ಚು ಯೋಚನೆ ಮಾಡುವ ಕಾರಣವೇ ತೋರಲಿಲ್ಲ.

ಶಿವಯ್ಯ ಬರು ಬರುತ್ತಾ ಸಾಮಾನ್ಯ ಸ್ಥಿತಿಗೆ ಬರತೊಡಗಿದ. ಆದರೆ ಆತನಲ್ಲಿ ಮೊದಲಿನ ಲವಲವಿಕೆ ಕಂಡುಬರುತ್ತಿರಲಿಲ್ಲ. ಸದಾಕಾಲ ಮಬ್ಬು ಮಬ್ಬಾಗಿ ಒಬ್ಬನೇ ಹೆಚ್ಚು ಹೊತ್ತು ಕುಳಿತುಬಿಡುತ್ತಿದ್ದ. ಆತನ ಈ ಸ್ಥಿತಿಯನ್ನು ನೋಡಿ ತಂದೆ ತಾಯಿಗಳಿಬ್ಬರೂ ಮರುಗಿದರು. ಹಲವಾರು ವೈದ್ಯರುಗಳ ಬಳಿ ಕರೆದೊಯ್ದರೂ ಹೆಚ್ಚಿನ ಪ್ರಯೋಜನ ಮಾತ್ರ ಕಾಣಲಿಲ್ಲ. ದೈಹಿಕವಾಗಿ ಸರಿಯಾಗಿಯೇ ಇದ್ದ ಶಿವಯ್ಯ ಮಾನಸಿಕ ತೊಳಲಾಟಕ್ಕೆ ಒಳಗಾಗಿದ್ದ. ಸಾಮಾನ್ಯ ವೈದ್ಯರು ಆತನ ಈ ಸ್ಥಿತಿಯನ್ನು ಅರಿಯಲಾರದೆ ಬರಿ ನಿದ್ರೆ ಮಾತ್ರೆಗಳನ್ನು ಮಾತ್ರ ಕೊಡುತ್ತಿದ್ದರು. ಅವರ ಈ ಅಜ್ಞಾನ ದಿಂದಾಗಿಯೋ ಅಥವಾ ಬದಲಾವಣೆಯಿಂದ ಮಗನ ಮನಸ್ಸು ಬದಲಾಗ ಬಹುದೆಂಬ ರುದ್ರಯ್ಯನ ಆಸೆಯಿಂದಲೋ ಕೊನೆಗೂ ಶಿವಯ್ಯ ಮರಳಿ ಮೈಸೂರಿಗೆ ಬರುವಂತಾಯಿತು. ಕಂಟ್ರಾಕ್ಟರ್ ಈರೇಗೌಡರ ಹತ್ತಿರ ಮೊದಲಿನಿಂದಲೂ ಶಿವಯ್ಯ ಕೆಲಸ ಮಾಡಿಕೊಂಡಿದ್ದ. ಈಗಲೂ ಅವರ ಬಳಿಯೇ ಶಿವಯ್ಯ ಹೋದ. ಶಿವಯ್ಯನ ಸೊರಗಿದ ದೇಹವನ್ನು ಕಂಡು ಆತನನ್ನು ಕೆಲಸಕ್ಕೆ ತೆಗೆದುಕೊಳ್ಳಲು ಈರೇಗೌಡರು ಹಿಂದೆ ಮುಂದೆ ನೋಡಿ ದರು. ಶಿವಯ್ಯನಂಥ ಕಾರ್ಮಿಕರ ಸ್ಥಿತಿಯನ್ನು ಓದುಗರಿಗೆ ಹೆಚ್ಚು ಹೇಳ ಬೇಕಾದ ಕಾರಣವಿಲ್ಲ. ಯಜಮಾನರುಗಳ ಮನಸ್ಸಿನ ಇಚ್ಛೆಗೆ ವಿರುದ್ಧವಾಗಿ ತಮ್ಮ ಸ್ವಾತಂತ್ರ್ಯವನ್ನು ಸ್ಥಾಪಿಸುವ ಹಕ್ಕನ್ನು ಅವರು ಎಂದೋ ಕಳೆದು ಕೊಂಡಿದ್ದಾರೆ. ಶಿವಯ್ಯನ ಸ್ಥಿತಿಯನ್ನು ಕಂಡು ಈರೇಗೌಡರು ಕೂಲಿಯಲ್ಲಿ ಎರಡು ರೂಪಾಯಿ ಕಡಿಮೆ ಮಾಡಿದರು. ಮರು ಮಾತಿಲ್ಲದೆ ಶಿವಯ್ಯ ಈ ಸ್ಥಿತಿಯನ್ನು ಒಪ್ಪಿಕೊಳ್ಳಲೇ ಬೇಕಾಯಿತು.

'ಹುಣಸೂರು ರೋಡ್ನಾಗೆ ಒಂದು ಕೆಲಸ ನಡೆಸ್ತೈತೆ. ಅಲ್ಲಿ ಹೋಗ

ನಮ್ಮ ಜನರ ತಾವ ಕೆಲಸಕ್ಕೆ ಸೇರಿಕೊ ' ಎಂದು ಈರೇಗೌಡರು ಶಿವಯ್ಯನಿಗೆ ಆಜ್ಞಾಪಿಸಿದರು. ಆ ಕಡೆ ಹೊರಟಿದ್ದ ಗುಂಪಿನೊಂದಿಗೆ ಶಿವಯ್ಯ ಸೇರಿಕೊಂಡ.

ಹುಣಸೂರು ರೋಡಿನಲ್ಲಿರುವ ಜೋಲ್ಟ್ ಆಫೀಸಿನ ಮುಂಭಾಗವನ್ನು ವಿಸ್ತರಿಸುವ ಕೆಲಸವನ್ನು ಈರೇಗೌಡರು ಕಂಟ್ರಾಕ್ಟ್ ಹಿಡಿದಿದ್ದರು. ಶಿವಯ್ಯ ಮೊದಲ ದಿನ ಕೆಲಸವನ್ನು ಹುರುಪಿನಿಂದಲೇ ಪ್ರಾರಂಭಿಸಿದ. ಜೋಲ್ಟ್ ಆಫೀಸು ಪತ್ರೇದಾರನಾದ ಪ್ರಶಾಂತನಿಗೆ ಸೇರಿದ್ದು (ಈ ಆಫೀಸಿನ ವಿವರಗಳು ಇದೇ ಲೇಖಕರ ' ಕಣ್ಮರೆಯಾದ ನಳಿನಿ ' ಎಂಬ ಕಾದಂಬರಿಯಲ್ಲಿ ಬಂದಿವೆ.) ಪ್ರಶಾಂತ, ಗುಂಡಪ್ಪ, ಮತ್ತು ರೀಟಾ ತಮ್ಮ ಕೆಲಸದಲ್ಲಿ ಒಳಗಡೆ ಮಗ್ನರಾಗಿದ್ದರು. ಮೈಸೂರಿನ ಆಹ್ಲಾದಕರ ಚಳಿಗಾಲದ ಕೆಲಸವಿಲ್ಲದ ದಿನಗಳವು. ಶಿವಯ್ಯ ಕೆಲಸ ಮಾಡುತ್ತಿದ್ದವನು ಒಮ್ಮೆಲೇ ನಿಂತುಬಿಟ್ಟ. ಉಳಿದ ಕೆಲಸಗಾರರು ಅಷ್ಟಾಗಿ ಅವನತ್ತ ಗಮನ ಹರಿಸಲಿಲ್ಲ. ಅರ್ಧ ನಿರ್ಮಿಸಿದ ಗೋಡೆಯ ಮೇಲೆ ಆತ ನಿಂತಿದ್ದ. ಒಮ್ಮೆಲೇ ' ಬೆಳಕು, ಬೆಳಕು. ದೇವ್ರೆ ' ಎಂದು ಕಿರುಚುತ್ತಾ ಆತ ದೊಪ್ಪನೆ ನೆಲಕ್ಕೆ ಬಿದ್ದು ಬಿಟ್ಟ. ಆತನ ಕಿರುಚುವಿಕೆ ಎಷ್ಟು ಜೋರಾಗಿತ್ತು ಎಂದರೆ ಜೋಲ್ಟ್ ಆಫೀಸಿನಲ್ಲಿ ಕುಳಿತಿದ್ದ ಮೂವರೂ ಹೊರ ಓಡಿ ಬಂದರು. ಇಷ್ಟು ಹೊತ್ತಿಗೆ ಕೆಲಸಗಾರರೆಲ್ಲ ಪ್ರಜ್ಞಾಹೀನ ಸ್ಥಿತಿಯಲ್ಲಿದ್ದ ಶಿವಯ್ಯನ ಸುತ್ತ ನೆರೆದಿದ್ದರು. ಗುಂಡಪ್ಪ ಅವರೆಲ್ಲರನ್ನೂ ದೂರ ಸರಿಯಿಸಿ ಶಿವಯ್ಯನನ್ನು ಜಾಗರೂಕತೆಯಾಗಿ ಎತ್ತಿಕೊಂಡು ತನ್ನ ಆಫೀಸಿನೊಳಗೆ ನಡೆದ. ಪ್ರಶಾಂತ ಉಳಿದ ಕೆಲಸಗಾರರಿಗೆ ಕೆಲಸವನ್ನು ನೋಡಿಕೊಳ್ಳಲು ಹೇಳಿ ಒಳಗೆ ಹೋದ.

ಸೋಫಾದ ಮೇಲೆ ಬಿಳಿಚಿಕೊಂಡಂತೆ ಮಲಗಿದ್ದ ಶಿವಯ್ಯನ ಮುಖಕ್ಕೆ ನೀರು ಸಿಂಪಡಿಸಿದ ಮೇಲೆ ಆತ ಕ್ರಮೇಣವಾಗಿ ಕಣ್ಣು ತೆರೆದ. ನಾನು ಎಲ್ಲಿದ್ದೇನೆ ಎಂದು ಅವನಿಗೆ ಅರಿವಾಗುವ ಮೊದಲೇ ಗುಂಡಪ್ಪ ಆತನನ್ನು ಸಮಾಧಾನ ಪಡಿಸಲು ತೊಡಗಿದ. ಕಾಫಿ ಕುಡಿದ ಮೇಲೆ ಶಿವಯ್ಯನಿಗೆ ಸ್ವಲ್ಪ ಚೇತರಿಕೆ ಬಂದಂತಾಯಿತು. ಈ ಸ್ಥಿತಿಯಲ್ಲಿ ಆತನನ್ನು ಪ್ರಶ್ನಿಸಬಾರದೆಂದು ಪ್ರಶಾಂತನಿಗೆ ಮೊದಮೊದಲು ಅನ್ನಿಸಿತು. ಆದರೆ ಶಿವಯ್ಯ ಏನೋ ಹೇಳಲು ಹಾತೊರೆಯುತ್ತಿದ್ದಾನೆ ಎಂದು ಪ್ರಶಾಂತನಿಗೆ ಗೊತ್ತಾಯಿತು.

ಪ್ರಶಾಂತ 'ಏನಾಗಿದೆ ಶಿವಯ್ಯ' ಎಂದು ಕೇಳಿದ. ಇಷ್ಟು ಯಾರಾದರೂ ಕೇಳಿದರೆ ಸಾಕು ಎಂಬಂತೆ ಕುಳಿತಿದ್ದ ಶಿವಯ್ಯ ನಡೆದುದನ್ನೆಲ್ಲವನ್ನೂ ಸಾದ್ಯಂತವಾಗಿ ವಿವರಿಸಿದ. ಕೊನೆಗೆ 'ಅವು ದೆವ್ವ ಅಲ್ಲ ಅಂತ ಈಗ ಅನ್ನಿಸುತ್ತಾಯಿದೆ ಬುದ್ಧಿ' ಎಂದು ತನ್ನ ಕಥೆಯನ್ನು ಶಿವಯ್ಯ ಮುಗಿಸಿದ.

ಆತನ ಕಥೆಯನ್ನು ಕುತೂಹಲದಿಂದ ಆಲಿಸಿದ ಗುಂಡಪ್ಪ ಮತ್ತು ಪ್ರಶಾಂತರು ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಇಬ್ಬರೂ ಏನೋ ಹೊಳೆದವರಂತೆ ನಸುನಕ್ಕರು. ಈ ಮೊದಲು ಇಂಥ ಮಾತ... ಗುಂಡಪ್ಪ ಕಿವಿಗೊಡುತ್ತಿರಲಿಲ್ಲ. ಆದರೆ ಜವರೇಗೌಡರ ಪಿಶಾಚಿಯ (ನೋಡಿ 'ಕಣ್ಮರೆಯಾದ ನಳಿನಿ') ನೆರವಿನ ನಂತರ ಆತನಿಗೆ ಇಂಥದರಲ್ಲಿ ಪೂರ್ತಿ ವಿಶ್ವಾಸ ಹುಟ್ಟಿತ್ತು.

'ಶಿವಯ್ಯ ನಿನಗಿನ್ನು ಗಾರೆ ಕೆಲಸ ಬೇಡ' ಎಂದ ಪ್ರಶಾಂತ.

'ಒಳ್ಳೆಯ ಐಡಿಯಾ' ಎಂದಳು ರೀಟಾ.

'ಶಿವಯ್ಯನ ನೆರವಿಲ್ಲದೆ ಬೆಳಕಿನ ರೂಪದ ಆ ಆಕೃತಿಗಳನ್ನು ಪತ್ತೆ ಹಚ್ಚುವುದು ಸಾಧ್ಯವೇ ಇಲ್ಲ' ಎಂದ ಗುಂಡಪ್ಪ. ಈಗ ಹೊಸ ಕೆಲಸ ಸಿಕ್ಕಿದ್ದಕ್ಕೆ ಸಂತೋಷಗೊಂಡು ನಗುಮುಖದಿಂದ ಬೀಗಿ ಶಿವಯ್ಯ ಕುಳಿತಿದ್ದ

೮

ಪ್ರಶಾಂತ ಮತ್ತು ಗುಂಡಪ್ಪರಿಗೆ ಶಿವಯ್ಯನ ಪ್ರಕರಣದಲ್ಲಿ ಲಾಭಾಂಶವೇನೂ ಕಾಣಲಿಲ್ಲ. ಆದರೆ ಅವನು ಹೇಳಿದ ಕಥೆ ಮಾತ್ರ ಕುತೂಹಲಯೋಗ್ಯವಾಗಿತ್ತು. ಆ ತರಹದ ಇರುವಿಕೆಯನ್ನು ಇವರು ಸಮರ್ಥಿಸಬಹುದಾಗಿತ್ತೇ ಹೊರತು ಅದನ್ನು ವ್ಯವಹಾರಿಕ ದೃಷ್ಟಿಯಿಂದ ಪರಿಗಣಿಸುವುದು ಸಾಧ್ಯವಿರಲಿಲ್ಲ.

ಮರುದಿನ ಬೆಳಿಗ್ಗೆ ಎಂದಿನಂತೆ ಆಫೀಸಿಗೆ ಬಂದಾಗ ಪ್ರಶಾಂತ ಚಿಂತೆಯಿಂದ ಕೂಡಿದವನಾಗಿದ್ದ. ಮೈಸೂರಿನಲ್ಲಿ ಸಾಕಷ್ಟು ಕೈಗಾರಿಕೆಗಳಿಗೆ ವಾಚ್‌ಮೆನ್‌ರನ್ನು ಒದಗಿಸಬೇಕಾಗಿತ್ತು. ಆ ಕೆಲಸವನ್ನು ಬಿಟ್ಟು ಗಾರೆ ಕೆಲಸದವನೊಬ್ಬ ಹೇಳಿದ ಮಾತನ್ನು ಕೇಳಿಕೊಂಡು ಬೆಂಗಳೂರಿಗೆ ಹೇಗೆ

ಹೋಗುವುದು ಎಂಬ ಚಿಂತೆ ಆತನನ್ನು ಕಾಡುತ್ತಿತ್ತು.

‘ಬೇಡ ಬಿಡಿ ಸಾರ್, ದೆವ್ವ ಕಟ್ಟಿಕೊಂಡು ನಮಗೇನು ಮಾಡುವುದಿದೆ’ ಎಂದ ಗುಂಡಪ್ಪ.

‘ಇದು ದೆವ್ವದ ಸಮಸ್ಯೆ ಮಾತ್ರ ಅಲ್ಲ ಗುಂಡಪ್ಪ, ಇದರಲ್ಲಿ ಏನೋ ಗೂಢವಾದದ್ದು ಇದೆ ಎಂದು ತೋರುತ್ತದೆ’ ಎಂದ ಪ್ರಶಾಂತ.

ಈ ವೇಳೆಗಾಗಲೇ ರೀಟಾ ಕೆಲವು ಪುಸ್ತಕಗಳು ಮತ್ತು ಫೈಲುಗಳನ್ನು ಹಿಡಿದು ಒಳಗೆ ಪ್ರವೇಶಿಸಿದ್ದಳು ಅವಳ ಮುಖವೂ ಯೋಚನೆಯಿಂದ ಕೂಡಿತ್ತು.

‘ನೀವು ಹೇಳಿದ ಕೆಲಸ ರೆಡಿಯಾಗಿದೆ ಸಾರ್’ ಎಂದು ಪ್ರಶಾಂತನ ಮುಂದೆ ಫೈಲು ಮತ್ತು ಪುಸ್ತಕಗಳನು ಇಟ್ಟಳು ಆ ಫೈಲುಗಳಲ್ಲಿ ತುಂಬಾ ವಿಚಿತ್ರವಾದ ಕೆಲವು ವಿವರಗಳು ಇದ್ದುವು. ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥ ಭಂಡಾರದಿಂದ ರೀಟಾ ಕಳೆದ ದಿನ ಕೆಲವು ಪುಸ್ತಕಗಳನ್ನು ತರಿಸಿಕೊಂಡಿದ್ದಳು. ಅವು ದೆವ್ವ ಮತ್ತು ಹೊರಲೋಕದ ಜೀವಿಗಳನ್ನು ಕುರಿತ ಪ್ರಸಿದ್ಧ ವಿದ್ವಾಂಸರು ಬರೆದ ಪುಸ್ತಕಗಳೇ ಆಗಿದ್ದವು ಅವಳು ನೀಡಿದ ಫೈಲುಗಳಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಹಲವಾರು ವಿವರಗಳು ಮತ್ತು ಟೀಕೆ ಟಿಪ್ಪಣಿಗಳು ಇದ್ದುವು. ಪ್ರಶಾಂತ ಅವುಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿರುವಾಗ ಗುಂಡಪ್ಪ ಇಂಥದರಲ್ಲಿ ತನಗೆ ಯಾವ ಆಸ್ಥೆಯೂ ಇಲ್ಲವೆಂಬಂತೆ ನಿರ್ಲಿಪ್ತನಾಗಿ ಕುಳಿತಿದ್ದ. ಕೆಲವು ನಿಮಿಷಗಳ ನಂತರ ಫೈಲುಗಳನ್ನು ವೀಕ್ಷಿಸುತ್ತಿದ್ದ ಪ್ರಶಾಂತ ಒಮ್ಮೆಲೇ ಆಶ್ಚರ್ಯದಿಂದ ಗುಂಡಪ್ಪನ ಬಳಿ ಬಂದು ‘ಇದು ನೋಡು ಗುಂಡಪ್ಪ’ ಎಂದು ತೋರಿಸಿದ. ಕಳೆದ ಶತಮಾನದಲ್ಲಿ ಲಂಡನ್ ವಿಶ್ವವಿದ್ಯಾನಿಲಯದ ಅಧ್ಯಾಪಕರೊಬ್ಬರು ದೆವ್ವಗಳನ್ನು ಕುರಿತು ಮಾಡಿದ ಸಂಶೋಧನೆಯ ವಿವರಗಳು ಅದರಲ್ಲಿದ್ದವು. ಅವರ ಸಂಶೋಧನೆ ಬಲವಾಗಿ ನಡೆಯುತ್ತಿದ್ದಂತೆ ಹೊರಲೋಕದ ಜೀವಿಗಳ ಬಗೆಗೆ ಅವರ ಆಸ್ಥೆ ಅಂಕುರಿಸಿತ್ತು. ಕೊನೆಗೆ ಹೊರಲೋಕದ ಜೀವಿಗಳು ನಮ್ಮಂತೆಯೇ ದೇಹ ಧಾರಣೆ ಮಾಡಿ ಈ ಲೋಕದಲ್ಲಿ ವಿವಿಧ ಕಾರಣಗಳಿಗಾಗಿ ಜೀವಿಸುತ್ತಿರಬಹುದು ಎಂಬ ಸಂಶಯವನ್ನು ಆ ಅಧ್ಯಾಪಕರು ವ್ಯಕ್ತಪಡಿಸಿದ್ದರು. ಈ

ವಿವರವನ್ನು ಓದಿದ ನಂತರ ಗುಂಡಪ್ಪನಲ್ಲಿ ಕುತೂಹಲದ ಮೊಳಕೆ ಒಡೆಯಿತು.

'ಬಹಳ ಕುತೂಹಲಕಾರಿಯಾಗಿದೆ ಸಾರ್ ಇದು. ಇದ್ದ ಕೆಲಸವನ್ನೆಲ್ಲ ಬಿಟ್ಟು ಬೆಂಗಳೂರಿಗೆ ಹೋಗಿ ಬಿಡೋಣ ಅನ್ನಿಸುತ್ತೆ'? ಎಂದು ಗುಂಡಪ್ಪ.

ಪ್ರಶಾಂತ ರೀಟಾಳ ಮುಖವನ್ನು ನೋಡಿದ.

'ನನಗೆ ತಿಳಿದ ಹಾಗೆ ಬೇರೆ ಲೋಕದ ಜೊತೆಗೆ ವ್ಯವಹಾರವನ್ನು ಇಟ್ಟುಕೊಂಡಿರಬಹುದಾದ ಹಲವಾರು ಸಿದ್ಧ ಪುರುಷರು ಇದ್ದಾರೆಂದು ಯೋಗಿಗಳು ನಂಬುತ್ತಾರೆ. ಅಂಥ ಕೆಲವು ಜನರನ್ನು ಭೇಟಿಮಾಡಿ ಶಿವಯ್ಯ ಕೊಟ್ಟ ವಿವರಗಳನ್ನು ಅವರ ಮುಂದೆ ಇಟ್ಟರೆ ಹೇಗೆ'? ಎಂದು ಕೇಳಿ ಸುಮ್ಮನಾದಳು ರೀಟಾ.

ಭಾರತೀಯ ಇತಿಹಾಸದಲ್ಲಿ ಡಾಕ್ಟರೇಟ್ ಡಿಗ್ರಿಯನ್ನು ಪಡೆದ ರೀಟಾಳ ಈ ಮಾತು ಸ್ವಲ್ಪ ತೂಕವುಳ್ಳದ್ದೆಂದು ಅನ್ನಿಸಿತು ಪ್ರಶಾಂತನಿಗೆ.

ಮೈಸೂರಿನ ಸುತ್ತ ಮುತ್ತಲೂ ಅಂಥ ಸಿದ್ಧ ಪುರುಷರು ಯಾರಿದ್ದಾರೆ ಎನ್ನುವ ಜಿಜ್ಞಾಸೆ ಈಗ ಮೂವರಲ್ಲಿಯೂ ಆರಂಭವಾಯಿತು. ಚಾಮುಂಡಿ ಬೆಟ್ಟದ ತಪ್ಪಲಿನಲ್ಲಿ ವಾಸವಾಗಿರುವ ಯೋಗಿ ನರೇಂದ್ರರನ್ನು ಭೇಟಿಮಾಡಬಹುದೆಂದು ರೀಟಾ ಮತ್ತು ಪ್ರಶಾಂತರು ಒಪ್ಪಿದರು. ಆದರೆ ಗುಂಡಪ್ಪ ಇವರ[illegible] ಇಷ್ಟಾಗಿ ಆಸ್ಥೆ[illegible] [illegible]ಲಿಲ್ಲ. ಹೇಗಾದರೂ ಮಾಡಿ ಬೆಂಗಳೂರಿಗೆ ಹೋಗಿ ಶಿವಯ್ಯ ಹೇಳಿದ ಆ ಮನೆಯನ್ನು ನೋಡಬೇಕೆಂಬ ಬುದ್ಧೀ ಅವನ [illegible]ಯಾಗಿತ್ತು.

ಒಲ್ಲದ ಮನಸ್ಸಿನಿಂದ ಗುಂಡಪ್ಪ ಉಳಿದ ಇಬ್ಬರೊಡನೆ ಚಾಮುಂಡಿ ಬೆಟ್ಟದ ತಪ್ಪಲಿನತ್ತ ನಡೆದ.

ಚಾಮುಂಡಿ-ಬೆಟ್ಟದ ತಪ್ಪಲು ಮೊದಲಿನಂತೆ ಈಗ ಇಲ್ಲ. ಅಲ್ಲಿ ಹಲವಾರು ಮಠಗಳು, ದೇವಸ್ಥಾನಗಳು ಮತ್ತು ಸಮಾಜ ಸೇವಾ ಸಂಸ್ಥೆಗಳು ತಲೆ ಎತ್ತಿವೆ. ಸ್ಮಶಾನ ಮಾತ್ರ ಅಲ್ಲಿ ಮೊದಲಿದ್ದ ಸ್ಥಳದಲ್ಲಿಯೇ ಇದೆ. ಯೋಗಿ ನರೇಂದ್ರರನ್ನು ಹುಡುಕುವುದು ಸುಲಭದ ಕೆಲಸವಾಗಲಿಲ್ಲ. ಅವರಿಗೆ ಒಂದು ನೆಲೆ ಮತ್ತು ತಾಣ ಇರಲಿಲ್ಲ. ಕಾಷಾಯ ಧರಿಸಿದ

ಸ್ವಾಮಿಗಳು ಅವರು ಆಗಿರಲಿಲ್ಲ. ಸದಾ ಬಿಳೀ ಬಣ್ಣದ ಮೊಂಡು ಪಂಚೆ ಯನ್ನು ಸುತ್ತಿಕೊಂಡು ಬರೀ ಮೈಯಿಂದ ತಿರುಗುತ್ತಿದ್ದ ಜಟಾ ಜೂಟ ಧಾರಿಗಳಾಗಿದ್ದರು. ಅವರ ವಿಹಾರಗಳು ನಿಗೂಢವಾಗಿಯೇ ಇದ್ದವು. ವಿಕ್ಷಿಪ್ತ ಸ್ವಭಾವದ ನರೇಂದ್ರರು ಯಾವತ್ತೂ ಊಟವನ್ನು ಮಾಡಿದುದನ್ನು ಕಂಡವರು ಇರಲಿಲ್ಲ. ಹಾಗೆಯೇ ಅವರೊಡನೆ ಹಾಯಾಗಿ ಕುಳಿತು ಮಾತ ನಾಡಿದವರೂ ಕಡಿಮೆಯೇ.

ಪ್ರಶಾಂತ ಮತ್ತು ಸಂಗಡಿಗರು ನರೇಂದ್ರರನ್ನು ತೆಪ್ಪಲಿನ ಒಂದು ಮೂಲೆಯಲ್ಲಿ ಗುರುತಿಸಿದರು. ದೂರದಿಂದಲೇ ಇವರ ಬರುತ್ತಿದ್ದುದನ್ನು ಗಮನಿಸಿದ ಯೋಗಿಗಳು ಆ ಸ್ಥಳವನ್ನು ಬಿಟ್ಟು ಬೇರೆ ಸ್ಥಳದತ್ತ ನಡೆದರು. ವಿಶಾಲವಾದ ವೃಕ್ಷವೊಂದರ ಕೆಳಗೆ ಆಸನವು ಮಾಡಿಕೊಂಡು ಅವರು ಕುಳಿತರು. ಕೆಲ ಸಮಯದ ನಂತರ ಈ ಮೂವರು ಅವರ ಎದುರು ಕೈ ಜೋಡಿಸಿಕೊಂಡು ಕುಳಿತಿದ್ದರು. ಕ್ಷಣ ಕಾಲದ ಮೌನದ ನಂತರ 'ಹೌದು ಅವರು ಅನ್ಯಲೋಕದ ಜೀವಿಗಳು' ? ಎಂದರು ನರೇಂದ್ರರು.

ಮೂವರೂ ಸಿಡಿಲು ಬಡಿದವರಂತೆ ಒಬ್ಬರ ಮುಖ ಒಬ್ಬರು ನೋಡಿ ಕೊಂಡರು. ನರೇಂದ್ರರು ಮಾತ್ರ ಹಸನ್ಮುಖಿಗಳಾಗಿ ಕಣ್ಣು ಮುಚ್ಚಿ ಕುಳಿತಿದ್ದರು.

'ಅಂದರೆ ಆ ತರ ಜನ ಇರಬಹುದೆ ?' ಎಂದು ಪ್ರಶ್ನಿಸಿದ ಪ್ರಶಾಂತ.

'ನಾವೆಲ್ಲಾ ಅದೇ ತರಹದ ಜನ' ಎಂದು ಗೂಢವಾಗಿ ಉತ್ತರಿಸಿ ದರು ಯೋಗಿಗಳು.

'ಅರ್ಥವಾಗಲಿಲ್ಲ' ಎಂದ ಪ್ರಶಾಂತ.

ಈ ಪ್ರಶ್ನೆಯನ್ನು ನಿರ್ಲಕ್ಷಿಸಿ ಯೋಗಿಗಳು ಹೇಳಿದರು 'ಅವನೊಬ್ಬ ಇದುವರೆಗೂ ಇಲ್ಲಿಯೇ ಇದ್ದ'

'ಈಗ ?' ಎಂದು ಬಾಯಿ ತೆರೆದು ಕೇಳಿದ ಗುಂಡಪ್ಪ.

ಯೋಗಿಗಳು ನಕ್ಕು ನುಡಿದರು 'ಅವನೊಬ್ಬ ಮಹಾ ಯೋಗಿಯು ಲ್ಲವೇ ! ನೀವು ಬರುವುದನ್ನು ಒಳಗಣ್ಣಿನಿಂದ ಕಂಡು ಅಂತರ್ಧಾನನಾದ'.

ಈ ಮಾತಿನ ತಳಬುಡ ಹುಲು ಮಾನವರಾದ ರೀಟಾ ಪ್ರಶಾಂತ ಮತ್ತು ಗುಂಡಪ್ಪರಿಗೆ ಅರ್ಥವಾಗಲಿಲ್ಲ.

೬

ಕೆಲ ದಿನಗಳು ಅವು. ಪ್ರಶಾಂತ ಅನ್ಯಲೋಕದ ಜೀವಿಗಳ ವಿಚಾರ ದಲ್ಲಿ ಗುಂಗು ಹಿಡಿದವನಂತೆ ಆಗಿದ್ದ. ಊಟ ನಿದ್ರೆಗಳ ಪರಿವೆ ಇಲ್ಲದೆ ಅನ್ಯ ಲೋಕದ ಜೀವಿಗಳಿಗೆ ಸಂಬಂಧಿಸಿದ ಪುಸ್ತಕಗಳ ಆಳವಾದ ಅಧ್ಯಯನದಲ್ಲಿ ತೊಡಗಿದ್ದ. ಆದರೆ ಯಾವುದನ್ನೂ ನಿಶ್ಚಿತವಾಗಿ ಆ ಬಗೆಗೆ ಹೇಳಲು ಬರು ವಂತಿರಲಿಲ್ಲ. ಅಂಥ ಜೀವಿಗಳನ್ನು ಕಂಡವರೆಲ್ಲ ಶಿವಯ್ಯನಂಥವರೆ. ಅಂಥವು ಗಳನ್ನು ದೆವ್ವಗಳೆಂದು ತಿಳಿದವರೇ ಹೆಚ್ಚು. ಸಂಶೋಧಕರ ಕೈಗೆ ಸಾಕ್ಷಿ ಸಮೇತವಾಗಿ ಯಾವ ಪುರಾವೆಯೂ ದೊರೆತಿರಲಿಲ್ಲ.

ಅವರೊಲ್ಲಬ್ಬ ನರೇಂದ್ರ ಯೋಗಿಗಳ ಬಳಿ ಏಕೆ ಬಂದ ಎನ್ನುವ ಪ್ರಶ್ನೆ ಮಾತ್ರ ಪ್ರಶಾಂತನನ್ನು ಆಳವಾಗಿ ಕಾಡುತ್ತಿತ್ತು. ನರೇಂದ್ರರು ಈ ಕುರಿತು ಬಾಯಿ ಬಿಡುವ ವ್ಯಕ್ತಿಗಳಾಗಿರಲಿಲ್ಲ. ತ್ರಿಕಾಲ ಜ್ಞಾನವುಳ್ಳವರಂತೆ ಕಾಣು ತ್ತಿದ್ದ ಆ ಯೋಗಿಗಳಿಗೆ ಇಂಥ ಪ್ರಶ್ನೆಗಳೇ ಕ್ಷುಲ್ಲಕವಾಗಿ ತೋರುತ್ತಿದ್ದುವು.

ಕೊನೆಗೆ ಪ್ರಶಾಂತ, ಗುಂಡಪ್ಪ, ರೀಟಾ ಮತ್ತು ಶಿವಯ್ಯ ನಾಲ್ವರೂ ಬೆಂಗಳೂರಿಗೆ ಹೋಗುವುದೆಂದು ನಿರ್ಧಾರವಾಯಿತು.

ಶಿವಯ್ಯ ಹೇಳಿದ ಸ್ಥಳಕ್ಕೆ ಸಮೀಪವಿರುವ 'ಏಳು ಬೆಟ್ಟ' ಎಂಬ ಹೋಟೆಲ್‌ನಲ್ಲಿ ರೂಮನ್ನು ಕಾದಿರಿಸಲಾಯಿತು. ಈಗ ಅವರು ಬೆಂಗ ಳೂರನ್ನು ತಲುಪಿದೊಡನೆ ಪ್ರಶ್ನಿಸಬೇಕಾದ ಮೊದಲ ವ್ಯಕ್ತಿ ಎಂದರೆ ರುದ್ರಯ್ಯ. ಹಲವಾರು ವರುಷ ವಾಚ್‌ಮನ್ ಕೆಲಸವನ್ನು ಮಾಡಿದ ಈ ವ್ಯಕ್ತಿಗೆ ಅನೂಹ್ಯ ವ್ಯಕ್ತಿಗಳ ಪರಿಚಯವಿರಲೇಬೇಕು ಎಂದುಕೊಂಡ ಪ್ರಶಾಂತ.

ಹೋಟೆಲ್ ತಲುಪಿದೊಡನೆ ಶಿವಯ್ಯನ ಮೂಲಕ ರುದ್ರಯ್ಯನನ್ನು ಕರೆಯಿಸಿಕೊಂಡರು. ಆದರೆ ರುದ್ರಯ್ಯನಿಗೆ ಇವರು ಬಂದಿರುವ ಉದ್ದೇಶ ಮಾತ್ರ ಗೊತ್ತಾಗದಂತೆ ಆತನಿಂದ ಮಾಹಿತಿಯನ್ನು ಹೊರಗೆಡಹುವುದು ಅವಶ್ಯವಾಗಿತ್ತು. ಹೀಗಾಗಿ ಶಿವಯ್ಯನ ಒಡೆಯರು ತಾವು ಮತ್ತು ಬೆಂಗ ಳೂರಿಗೆ ಯಾವುದೋ ವ್ಯಾಪಾರದ ಸಲುವಾಗಿ ಬಂದಿರುವುದಾಗಿ ರುದ್ರಯ್ಯ

ನಿಗೆ ತಿಳಿಸಲಾಯಿತು. ತನ್ನ ಮಗ ಮತ್ತೆ ಬೆಂಗಳೂರಿಗೆ ತನ್ನ ಒಡೆಯರ ಜೊತೆ ಬಂದಿರುವುದು ರುದ್ರಯ್ಯನಲ್ಲಿ ಬಹಳ ಆನಂದವನ್ನು ಉಂಟು ಮಾಡಿತ್ತು.

ರುದ್ರಯ್ಯ ಹೊಟೆಲ್‌ಗೆ ಬಂದೊಡನೆ ಪ್ರಶಾಂತನು ಆತನ ಮತ್ತು ಶಿವಯ್ಯನ ಯೋಗಕ್ಷೇಮವನ್ನು ವಿಚಾರಿಸಿಕೊಂಡ. ಇಂಥ ದೊಡ್ಡ ಜನ ತನ್ನ ಮತ್ತು ತನ್ನ ಮಗನಬಗೆಗೆ ಬಹಳ ಗೌರವವನ್ನು ಕೊಡುತ್ತಿರುವುದು ರುದ್ರಯ್ಯನಲ್ಲಿ ಖುಷಿ ಹೆಚ್ಚಲು ಕಾರಣವಾಯಿತು.

' ನಿಮ್ಮ ಒಡೆಯರು ಉಷಾರಾಗಿದ್ದಾರಾ? ' ಎಂದು ಪ್ರಶಾಂತ ಕೇಳಿ ದೊಡನೆ ಒಡೆಯರ ಬಗೆಗೆ ಒಂದೊಂದಾಗಿ ವಿವರಗಳನ್ನು ರುದ್ರಯ್ಯ ಹೇಳ ತೊಡಗಿದ. ಅವರ ಅಸಾಮಾನ್ಯ ವರ್ತನೆ, ಎಲ್ಲಿಂದ ಬರುತ್ತಾರೆ ಎಂಬುದರ ಬಗೆಗೆ ಗೊತ್ತಿಲ್ಲದಿರುವುದು, ಅವರು ವರುಷಗಳು ಕಳೆದರೂ ವಯಸ್ಸಾಗ ದವರಂತೆ ಇರುವುದು, ಇವೆಲ್ಲವನ್ನೂ ರುದ್ರಯ್ಯ ತನ್ನದೇ ಆದ ಭಾಷೆಯಲ್ಲಿ ವಿವರಿಸಿದ. ಈ ಎಲ್ಲಾ ಮಾತುಗಳಿಂದ ಮೂವರಿಗೂ ಭಾರಿ ಆಶ್ಚರ್ಯ ಮತ್ತು ಕುತೂಹಲಗಳು ಹುಟ್ಟಿದ್ದರೂ ಹೊರಗೆ ಮಾತ್ರ ಅದನ್ನು ತೋರ ಗೊಡಲಿಲ್ಲ.

ರುದ್ರಯ್ಯನಿಗೆ ಯಾವ ಸಂಶಯವೂ ಬಾರದಂತೆ ಎಚ್ಚರಿಕೆ ವಹಿಸ ವುದು ತುಂಬಾ ಅವಶ್ಯಕವಾಗಿತ್ತು.

ಈ ಘಟನೆ ಮುಗಿದೊಡನೆ ಶಿವಯ್ಯನನ್ನು ಪ್ರಶಾಂತ ಮೈಸೂರಿಗೆ ಕಳುಹಿಸಿಬಿಟ್ಟ. ಏಕೆಂದರೆ ಈ ಗೂಢಚಾರ ಕೆಲಸದ ಹಿಂದೆ ಶಿವಯ್ಯನಿದ್ದಾನೆ. ಎಂದು ಗೊತ್ತಾದರೆ ಆತನ ಪ್ರಾಣಕ್ಕೇ ಸಂಚಕಾರ ಬರುವ ಸಂಭವವಿತ್ತು.

೦

ಮರುದಿನದ ಬೆಂಗಳೂರಿನ ಪತ್ರಿಕೆಗಳಲ್ಲಿ ಒಂದು ವಿಚಿತ್ರವಾದ ಸುದ್ದಿ ಪ್ರಕಟವಾಗಿತ್ತು. ' ವಿಶ್ವವಿದ್ಯಾನಿಲಯದ ಭೂ ತತ್ವ ಮತ್ತು ಪುರಾತತ್ವ ಇಲಾಖೆಯ ಮುಖ್ಯಸ್ಥರು, ವಯೋವೃದ್ಧರು ಮತ್ತು ಉದ್ದಾಮ ಪಂಡಿತರು

ಆದ ಡಾ. ನರಸಿಂಹಮೂರ್ತಿಗಳ ಅಪಹರಣ' ಎಂಬುದೇ ಆ ಸುದ್ದಿಯಾಗಿತ್ತು. ಸಿರಿವಂತರನ್ನು ಅಪಹರಿಸಿ ದುಡ್ಡು ಕೀಳುವ ಕದೀಮರು ಇದ್ದಾರೆ ಎಂದರೆ ನಂಬಬಹುದು. ಆದರೆ ಡಾ|| ನರಸಿಂಹಮೂರ್ತಿಯಂಥ ಮಧ್ಯಮ ವರ್ಗದ ಸಜ್ಜನರನ್ನು ಅಪಹರಿಸುವ ಕಾರ್ಯವನ್ನು ಮಾತ್ರ ನಂಬಲು ಆಗುತ್ತಿರಲಿಲ್ಲ. ಪ್ರಶಾಂತನಿಗೆ ಬೆಳಗಿನ ಈ ಸುದ್ದಿ ತಾನು ಬಂದ ಕಾರ್ಯದೊಡನೆ ಸಂಬಂಧ ವಿದೆ ಎನ್ನಿಸತೊಡಗಿತು. ಇವರೆಲ್ಲೊಬ್ಬ ನರೇಂದ್ರ ಯೋಗಿಗಳ ಬಳಿ ಹೋಗಿದ್ದಕ್ಕೂ ಮತ್ತು ನರಸಿಂಹಮೂರ್ತಿಗಳ ಅಪಹರಣಕ್ಕೂ ಏನಾದರೂ ಸಂಬಂಧವಿರಬಹುದೇ ಎಂದು ಪ್ರಶಾಂತನ ಮನಸ್ಸು ಯೋಚಿಸತೊಡಗಿತು.

ಇಷ್ಟು ಹೊತ್ತಿಗಾಗಲೇ ವತ್ಸನ್ ದಂಪತಿಗಳ ಮನೆಯನ್ನು ದೂರ ದಿಂದಲೇ ಕಾಯುವುದಕ್ಕೋಸ್ಕರ ಗುಂಡಪ್ಪ ಹೊರಟು ಹೋಗಿದ್ದ. ವತ್ಸನ್ ದಂಪತಿಗಳ ಮನೆ ಈ ಮೊದಲು ಯಾರಿಗೆ ಸೇರಿದ್ದು ಎಂಬುದನ್ನು ಪತ್ತೆ ಮಾಡಲು ರೀಟಾ ಹೊರಟು ಹೋಗಿದ್ದಳು.

ಸಾಕಷ್ಟು ಹೊತ್ತು ಕಾದ ಬಳಿಕ ವತ್ಸನ್ ದಂಪತಿಗಳ ಮನೆಯಿಂದ ಬಿಳಿಯ ಕಾರೊಂದು ಹೊರ ಬರುತ್ತಿರುವುದನ್ನು ಗುಂಡಪ್ಪ ಕಂಡ. ಕೂಡಲೇ ತನ್ನ ಕಾರಿನಲ್ಲಿ ಆ ಕಾರನ್ನು ಹಿಂಬಾಲಿಸಬೇಕೆಂದು ತೋರಿತು. ಅದರಂತೆಯೇ ಆತನು ಆ ಕಾರನ್ನು ಬೆನ್ನಟ್ಟಿ ಹೊರಟ. ನಿಧಾನವಾಗಿ ಕಾರು ಜಯನಗರ ದತ್ತ ಹೊರಟಿತು. ಜಯನಗರದ 5ನೆಯ ಬ್ಲಾಕ್‌ನಲ್ಲಿ ವಾಸವಾಗಿರುವ ಡಾ|| ಜನಾರ್ಧನ್ ಎನ್ನುವವರ ಮನೆಯ ಮುಂಭಾಗದಲ್ಲಿ ಕಾರು ನಿಂತಿತು. ಗುಂಡಪ್ಪ ತನ್ನ ಕಾರನ್ನು ಮನೆಯಿಂದ ದೂರ ನಿಲ್ಲಿಸಿ ಜನಾರ್ಧನರ ಮನೆಯ ಕಡೆ ನಡೆದುಕೊಂಡೇ ಹೊರಟ. ಡಾ|| ಜನಾರ್ಧನರ ಭಾರತೀಯ ಪುರಾಣ ಗಳ ಬಗೆಗೆ ಆಳವಾಗಿ ಅಭ್ಯಸಿಸಿದವರು. ವತ್ಸನ್‌ರ ಮನೆಯಿಂದ ಹೊರಟ ಕಾರು ಜನಾರ್ಧನರ ಮನೆಯನ್ನು ತಲುಪಿದ್ದು ಗುಂಡಪ್ಪನಿಗೆ ಸ್ವಲ್ಪ ಆಶ್ಚರ್ಯ ವನ್ನು ಉಂಟು ಮಾಡಿತ್ತು. ಆದರೆ ಆ ದಿನದ ಪತ್ರಿಕೆಯಲ್ಲಿ ನರಸಿಂಹಮೂರ್ತಿ ಗಳ ಅಪಹರಣದ ಸುದ್ದಿಯನ್ನು ಓದಿದ್ದ ಗುಂಡಪ್ಪ ತನ್ನ ಮುಂದೆ ನಡೆಯುತ್ತಿ ರುವ ಘಟನೆಗಳು ಮಹತ್ವದವೆಂದು ಭಾವಿಸಿದ.

ಜನಾರ್ಧನರವರ ಮನೆಯನ್ನು ತನ್ನ ವೈರಿ ವಲಯಕ್ಕೆ ಸೇರಿದ ವ್ಯಕ್ತಿ ಯೊಂದು ಅಲ್ಲಿ ಕುಳಿತಾಗ ಪ್ರವೇಶಿಸುವುದು ಉಚಿತವೇ ಎಂದು ತನ್ನಲ್ಲಿಯೇ

ಗುಂಡಪ್ಪ ವಿಚಾರಿಸಿಕೊಂಡ. ಆದರೆ ಅನ್ಯಮಾರ್ಗವೇ ಇಲ್ಲದ್ದರಿಂದ ಧೈರ್ಯ
ವಾಗಿ ಮುಂದೆ ಹೋಗಿ ಅವರ ಮನೆಯ ಕರೆ ಗುಂಡಿಯನ್ನೊತ್ತಿದ.
ಆಗಂತುಕನು ತನ್ನ ನೀಳವಾದ ಕಾಲುಗಳನ್ನು ಚಾಚಿಕೊಂಡು ಜನಾರ್ಧನ
ರೊಡನೆ ಮಾತಿಗೆ ತೊಡಗಿದ್ದ. ಆ ವ್ಯಕ್ತಿ ಮತ್ತಾರೂ ಆಗಿರದೇ ವೀರೇಂದ್ರನೇ
ಆಗಿದ್ದ.

ಡಾ|| ಜನಾರ್ಧನರು ಗುಂಡಪ್ಪನನ್ನು ಸಂಶಯದ ದೃಷ್ಟಿಯಿಂದ
ನೋಡುತ್ತಾ 'ಏನು ಬೇಕು'? ಎಂದು ಕೇಳಿದರು. ಗುಂಡಪ್ಪ ತಾನು
ಮಂಗಳೂರು ಕಡೆಯವನೆಂದೂ, ಅಲ್ಲಿ ಪುರಾಣಕ್ಕೆ ಸಂಬಂಧಿಸಿದ ಪತ್ರಿಕೆ
ಯೊಂದನ್ನು ಪ್ರಾರಂಭಿಸುವವನೆಂದೂ ಮತ್ತು ಅದರ ಸಂಪಾದಕ ತಾನೇ
ಎಂದು ಪರಿಚಯಿಸಿಕೊಂಡ. ಇಂಥ ವಿಷಯಗಳಲ್ಲಿ ಬಹಳ ಆಸಕ್ತಿಯನ್ನು
ಹೊಂದಿದ್ದ ಜನಾರ್ಧನರು ಕೂಡಲೇ ಆತನನ್ನು ಉಪಚರಿಸಿ ಕುಳ್ಳಿರಿಸಿದರು.
ಗುಂಡಪ್ಪ ಆಗುಂತಕನನ್ನು ಸೂಕ್ಷ್ಮವಾಗಿ ಅವಲೋಕಿಸಿದ. ಆತನು ಎಲ್ಲಾ
ವಿಧದಲ್ಲೂ ಭಾರತೀಯರಿಗಿಂತ ಭಿನ್ನವಾಗಿದ್ದಾನೆ ಎಂದು ಗುಂಡಪ್ಪ ಕಂಡು
ಹಿಡಿದ. ಆ ವ್ಯಕ್ತಿಯ ಎತ್ತರವೇ ಸಾಮಾನ್ಯ ಭಾರತೀಯ ವ್ಯಕ್ತಿಗಿಂತ
ಹೆಚ್ಚಾಗಿತ್ತು. ಜನಾರ್ಧನರು ಆಗಂತುಕನ ಕಡೆಗೆ ತಿರುಗಿ 'ಅದೇ ಹೇಳಿದೆ
ನಲ್ಲಾ ನೀವು ಕೇಳುತ್ತಿರುವ ಕೇಳುತ್ತಿರುವ ವ್ಯಕ್ತಿ ಎರಡು ತಿಂಗಳ ಹಿಂದೆ
ಅಶೋಕಾ ಹೋಟೆಲ್‌ನಲ್ಲಿ ವಾಸವಾಗಿದ್ದೇನೆಂದು ತಿಳಿಸಿದ್ದರು'.

'ಆತನೂ ನಾನೂ ಆಕ್ಸ್‌ಫರ್ಡ್‌ನಲ್ಲಿ ಒಂದೇ ರೂಮಿನಲ್ಲಿ ಓದು
ತ್ತಿದ್ದೆವು' ಎಂದ ವೀರೇಂದ್ರ.

'ಅವರಿಗೆ ಪುರಾಣ-ಮತ್ತು ಭಾರತೀಯ ಜನಜೀವನದ ಬಗೆಗೆ ತುಂಬಾ
ಆಸಕ್ತಿಯಿತ್ತು' ಎಂದರು ಡಾ|| ಜನಾರ್ಧನ್.

'ಮತ್ತೆ ಅದೇಕೆ ನಿಮ್ಮಿಂದ ದೂರ ಸರಿದರು'? ಎಂದು ಕೇಳಿದ
ವೀರೇಂದ್ರ.

'ಅದೇ ನನಗೂ ಗೂಢವಾಗಿ ಉಳಿದಿದೆ. ಇಷ್ಟು ಒಡನಾಟ
ಹೊಂದಿದ ವ್ಯಕ್ತಿ ಇದ್ದಕ್ಕಿದ್ದ ಹಾಗೆ ನಮ್ಮಿಂದ ದೂರವಾದುದೇಕೆ ಎಂಬುದು
ಮಾತ್ರ ಗೊತ್ತಾಗುತ್ತಿಲ್ಲ. ಅದಲ್ಲದೆ ಈ ದಿನ ನರಸಿಂಹಮೂರ್ತಿಗಳು
ಅಪಹರಣವಾದ ಸುದ್ದಿಯು ನನ್ನನ್ನು ತಲ್ಲಣಗೊಳಿಸಿದೆ'. ಜನಾರ್ಧನರ

ಈ ಮಾತು ಗುಂಡಪ್ಪನಲ್ಲಿ ವಿಶೇಷ ಆಸಕ್ತಿಯನ್ನು ಹುಟ್ಟಿಸಿತು. ವೀರೇಂದ್ರನಿಗೆ ನರಸಿಂಹಮೂರ್ತಿಗಳ ಅಪಹರಣದ ಸುದ್ದಿ ತಿಳಿದಂತೆ ತೋರಲಿಲ್ಲ.

ಅವನು 'ಯಾವ ನರಸಿಂಹಮೂರ್ತಿಗಳು ?' ಎಂದು ಕೇಳಿದ. ಆತನ ಆ ಪ್ರಶ್ನೆಯಿಂದ ಜನಾರ್ಧನರು ಕೊಂಚ ಗಲಿಬಿಲಿಗೊಂಡವರಂತೆ ಕಂಡರು. 'ಏನು, ನರಸಿಂಹಮೂರ್ತಿಗಳು ಗೊತ್ತಿಲ್ಲವೆ ನಿಮಗೆ ? ಪುರಾತನದ ಬಗೆಗೆ ಆಸಕ್ತಿಯಿದೆ ಎನ್ನುತ್ತೀರಿ ಮತ್ತೆ ! ನರಸಿಂಹಮೂರ್ತಿಗಳ ಹೆಸರು ಗೊತ್ತಿಲ್ಲ ಎನ್ನುತೀರಲ್ಲಾ '? ಈಗ ಗುಂಡಪ್ಪ 'ಅದೇ ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿದ್ದರಲ್ಲ ಅವರೇ ತಾನೇ ? ' ಎಂದ.

ಜನಾರ್ಧನರು ಈಗ ಗುಂಡಪ್ಪನತ್ತ ತಿರುಗಿ ' ಹಾಂ ! ಅವರೇ ' ಎಂದರು.

ವೀರೇಂದ್ರನಿಗೆ ಈಗ ಏನು ಮಾಡಬೇಕೆಂದು ತೋಚಲಿಲ್ಲ. ಅವರೆ ಅಪೆಕ್ಸಗಾಮ ನರಸಿಂಹಮೂರ್ತಿಗಳನ್ನು ಅಪಹರಿಸಿರಬಹುದು ಎನ್ನುವ ಸಂಶಯ ಮಾತ್ರ ಬಲವಾಯಿತು. ಜನಾರ್ಧನರ ಬಳಿ ಗಾಮ ಇರಬಹುದೆಂದು ತಿಳಿದು ಇಲ್ಲಿಗೆ ಬಂದದ್ದಾಯಿತು. ಇನ್ನು ನರಸಿಂಹಮೂರ್ತಿಗಳನ್ನು ಹುಡುಕಿಕೊಂಡು ಹೊರಡಬೇಕು ಎಂದು ವೀರೇಂದ್ರ ಯೋಚಿಸಿದ. ಗುಂಡಪ್ಪ ಮಾತ್ರ ತನ್ನ ತತ್ತನ್ನು ಬಿಡದೆ ಜನಾರ್ಧನರೊಡನೆ ಮಾತಿಗೆ ಇಳಿದಿದ್ದ.

' ಯಾರನ್ನು ಸಾರ್ ಇವರು ಹುಡುಕುತ್ತಿರುವುದು '? ಎಂದು ಕುತೂಹಲದಿಂದ ಗುಂಡಪ್ಪ ಕೇಳಿದ.

ವೀರೇಂದ್ರ ಒಮ್ಮೆ ಸಖಿಶಿಖಾಂತವಾಗಿ ಗುಂಡಪ್ಪನನ್ನು ನೋಡಿದ. ' ಇವರ ಸ್ನೇಹಿತರು ರಾವ್ ಎನ್ನುವವರು ಇಲ್ಲಿಗೆ ಬರುತ್ತಿದ್ದರು. ಅವರ ಎಲ್ಲಿಂದ ಬಂದವರು ಎಲ್ಲಿಗೆ ಹೋದರು ಎಂಬುದು ಮಾತ್ರ ನನಗೆ ಗೊತ್ತಿಲ್ಲ ಒಂದು ದಿನ ಇದ್ದಕ್ಕಿದ್ದಂತೆ ಆಕಾಶದಿಂದ ಇಳಿದವರಂತೆ ಇಲ್ಲಿಗೆ ಬಂದರು. ಭಾರತೀಯ ಜೀವನದ ಉಗಮವನ್ನು ಕುರಿತು ಹಲವಾರು ಪ್ರಶ್ನೆಗಳನ್ನು ಕೇಳಿದರು. ಅವರ ವಾದಗಳು ವಿಚಿತ್ರವಾಗಿದ್ದವು. ದ್ರಾವಿಡರು ಅರಬ್ಬೀ ಸಮುದ್ರದಲ್ಲಿ ಈಗ ಮುಳುಗಿಹೋದ ಒಂದು ಪ್ರದೇಶದಿಂದ ಬಂದವರೆಂದು ರಾವ್ ಹೇಳುತ್ತಿದ್ದರು. ನಲ್ವತ್ತು ವಯಸ್ಸಿನ ನೀಳಕೇಶದ ಗಡ್ಡಧಾರಿ

ರಾವ್ ತುಂಬಾ ತೀಕ್ಷ್ಣಮತಿಗಳು. ಅವರೊಡನೆಯ ವಾದ ಮತ್ತು ಚರ್ಚೆ ಎಷ್ಟು ಉಲ್ಲಾಸದಾಯಕವಾಗಿತ್ತೆಂದರೆ, ಅವರು ಎಲ್ಲಿಂದ ಬಂದವರು ಎಂಬುದನ್ನು ಕೇಳುವುದನ್ನೇ ನಾನು ಮರೆತೆ ' ಜನಾರ್ಧನರಾಯರ ಈ ಮಾತು ಮುಂದುವರೆದಿದ್ದಾಗ ವೀರೇಂದ್ರನು ರಾವ್ ಮತ್ತಾರೂ ಆಗಿರದೆ ಅಪೇಕ್ಷ ಗಾಮನೇ ಎಂದು ಯೋಚಿಸಿದ. ಡಾ|| ಜನಾರ್ಧನರು ತಮ್ಮ ಮಾತನ್ನು ಮುಂದುವರೆಸಿದ್ದರು, ' ರಾವ್ ಅವರು ಯಾರೊಡನೆಯೂ ಹೆಚ್ಚು ಸಂಪರ್ಕವನ್ನು ಬೆಳೆಸುತ್ತಿರಲಿಲ್ಲ. ಆದರೆ ಒಂದು ಸಲ ಅಶೋಕಾ ಹೋಟೆಲ್‌ನ ಅವರ ರೂಮಿಗೆ ಹೋಗಿದ್ದೆ. ಅವರ ರೂಮಿನಲ್ಲಿ ಹೆಂಗಸೊಬ್ಬಳನ್ನು ಕಂಡು ನನಗೆ ಆಶ್ಚರ್ಯವೇ ಆಯಿತು. ಆದರೆ ಅವಳು ರಾವ್‌ಗೆ ತಕ್ಕ ಸಂಗಾತಿ. ಪಾಶ್ಚಾತ್ಯ ಜನಪದ ಮುಖಗಳನ್ನು ಅವಳು ಆಳವಾಗಿ ಅಭ್ಯಾಸಮಾಡಿದ್ದಳು. ಅವಳೊಡನೆ ರಾವ್ ತುಂಬಾ ಚರ್ಚೆಯನ್ನು ಮಾಡುತ್ತಿದ್ದರು. '

' ಆ ಹೆಂಗಸು ರಾವ್ ಅವರ ಮಡದಿಯೇ ? ' ಎಂದು ವೀರೇಂದ್ರ ಕೇಳಿದ.

ಜನಾರ್ಧನರಾಯರು ನಸು ನಕ್ಕು ' ವಿದ್ವಾಂಸರಲ್ಲಿ ಇಂಥ ಕ್ಷುಲ್ಲಕ ಪ್ರಶ್ನೆಗಳು ತಲೆ ಎತ್ತುವುದಿಲ್ಲ ' ಎಂದರು.

೧೧

ಬೆಂಗಳೂರಿನ ಪೋಲಿಸ್ ಇಲಾಖೆಯಲ್ಲಿ ತನಿಖಾ ವಿಭಾಗದ ಮುಖ್ಯ ಸಿ.ಐ.ಡಿ. ಆಗಿ ವೀರಯ್ಯನವರು ಅಧಿಕಾರ ವಹಿಸಿಕೊಂಡು ಕೆಲವೇ ತಿಂಗಳುಗಳು ಕಳೆದಿದ್ದವು. ಇನ್ನು ಮೂರು ತಿಂಗಳಲ್ಲಿ ನಿವೃತ್ತಿ ಹೊಂದಲಿದ್ದ ಅವರಿಗೆ ಕೆಲಸದಲ್ಲಿ ಅಷ್ಟೇನು ಆಸಕ್ತಿ ಉಳಿದಿರಲಿಲ್ಲ. ತಮ್ಮ ಹರೆಯದ ದಿನಗಳಲ್ಲಿ ಖೈದಿಗಳನ್ನು ಬೂಟು ಕಾಲಿನಿಂದ ಒದ್ದ ಅವರಿಗೆ ಈಗ ಕಾಲಿನಲ್ಲಿ ವ್ರಣಗಳಾಗಿದ್ದವು. ಅವು ವಾಸಿಯಾಗುವುದು ತುಂಬಾ ಕಠಿಣವಾಗಿತ್ತು. ಡಯಾಬಿಟೀಸ್ ಬ್ಲಡ್‌ಪ್ರೆಷರ್, ಹೊಟ್ಟೆಯಲ್ಲಿ ಪೆಪ್ಟಿಕ್ ಅಲ್ಸರ್, ಇತ್ಯಾದಿ ರೋಗಗಳಿಂದ ನರಳುತ್ತಿದ್ದ ವೀರಯ್ಯನವರು ಅಪರಾಧಗಳನ್ನು ಪತ್ತೆ ಹಚ್ಚುವುದರ ಒದಲು

ತಮ್ಮ ರೋಗಗಳಿಗೆ ಒಬ್ಬ ಒಳ್ಳೆಯ ವೈದ್ಯನನ್ನು ಪತ್ತೆ ಹಚ್ಚುವುದರಲ್ಲಿಯೇ ಹೆಚ್ಚಿನ ಕಾಲವನ್ನು ವಿನಿಯೋಗಿಸಬೇಕಾಗಿತ್ತು. ಅಲೋಪತಿ, ಆಯುರ್ವೇದ, ಯುನಾನಿ, ನಿಸರ್ಗ ಚಿಕಿತ್ಸೆ ಇತ್ಯಾದಿ ಉಪಚಾರಗಳೆಲ್ಲ ಮುಗಿದು ಈಗ ಅವರು ತಮ್ಮ ರೋಗಗಳು ವಾಸಿಯಾಗದ ರೋಗಗಳು ಎಂಬ ದುಃಖಭರಿತ ನಿರ್ಧಾರಕ್ಕೆ ಬಂದು ತಲುಪಿದ್ದರು. ಇದೆಲ್ಲಕ್ಕೆ ಮಿಗಿಲಾಗಿ ಅವರ ಮಗಳ ಮದುವೆಯ ಸಮಸ್ಯೆ ಬಹಳವಾಗಿ ಅವರನ್ನು ಕಾಡುತ್ತಿತ್ತು. ಅಧಿಕಾರದಲ್ಲಿರುವಾಗಲೇ ಮಗಳ ಮದುವೆಯನ್ನು ಮಾಡದಿದ್ದರೆ ತಮ್ಮ ಪಾಡು ನಾಯಿ ಪಾಡು ಎನ್ನುವ ಅರಿವು ವೀರಯ್ಯನವರಿಗೆ ಇತ್ತು. ಆದರೆ ಹಿಡಂಬೆ, ಶೂರ್ಪನಕೆಯರ ಅಕ್ಕನೋ, ತಂಗಿಯೋ ಎನ್ನುವಂತೆ ತೋರುತ್ತಿದ್ದ ಅವರ ಮಗಳನ್ನು ಜಯಿಸಲು ಯಾವ ವಿದ್ಯಾವಂತ ತರುಣನ ಮನಸ್ಸು ಇದುವರೆಗೆ ಒಪ್ಪಿರಲಿಲ್ಲ. ವೀರಯ್ಯನವರು ತಮ್ಮ ಪೋಲಿಸ್ ಗತ್ತುಗಳನ್ನೋ, ಗಮ್ಮತ್ತುಗಳನ್ನೋ ತಮ್ಮ ಕೈಕೆಳಗಿನ ಅಧಿಕಾರಿಗಳ ಮೇಲೆ ಪ್ರಯೋಗಿಸಿ ಮಗಳಿಗೆ ಯೋಗ್ಯನಾದ ವರನನ್ನು ಹುಡುಕುವುದರಲ್ಲಿ ಸಂಪೂರ್ಣವಾಗಿ ವಿಫಲರಾಗಿದ್ದರು.

ಇಂಥ ವೀರಯ್ಯನವರ ಮುಂದೆ ನರಸಿಂಹನ ಮೂರ್ತಿಗಳ ಅಪಹರಣದ ಫೈಲು ಒಂದು ಕುಳಿತಿತ್ತು. ಹೊಟ್ಟೆ ಹುಣ್ಣಿನ ಬಾಧೆಯಿಂದ ತಪ್ಪಿಸಿಕೊಳ್ಳಲು ಪದೇ ಪದೇ ನೀರು ಕುಡಿಯುತ್ತ ವೀರಯ್ಯನವರು ಫೈಲಿನ ಪುಟಗಳನ್ನು ವೀಕ್ಷಿಸುತ್ತಿದ್ದರು. ಅವರಿಗೆ ನರಸಿಂಹನ ಮೂರ್ತಿಗಳ ಅಪಹರಣ ಒಬ್ಬ ಮುದಿವಯಸ್ಸಿನ ಶಿಕ್ಷಕನ ಅಪಹರಣ ಮಾತ್ರವಾಗಿ ಕಂಡಿತು. ಪುರಾಣದಲ್ಲಿ ಆಸಕ್ತಿಯುಳ್ಳವರು ಎನ್ನುವ ಮಾಹಿತಿಯನ್ನು ಫೈಲಿನಲ್ಲಿ ಓದಿ ವೀರಯ್ಯನವರು ನರಸಿಂಹಮೂರ್ತಿಗಳು ಹರಿಕಥೆ ಮಾಡುವ ದಾಸರಿದ್ದಿರಬಹುದು ಎಂದುಕೊಂಡರು. ತಮ್ಮ ಘನ ಗೌರವಗಳಿಗೆ ಇಂಥ ಹರಿಕಥೆ ದಾಸನ ಅಪಹರಣವನ್ನು ಪತ್ತೆ ಹಚ್ಚಲು ಹೊರಡುವುದು ಒಂದು ದೊಡ್ಡ ಕುಂದು ಎಂದು ಅವರು ಸಹಜವಾಗಿ ಭಾವಿಸಿದರು. ಹೀಗಾಗಿ ತಮ್ಮ ಉಪ ಅಧಿಕಾರಿಯಾಗಿದ್ದ ಖಳನಾಯಕನಂತೆ ತೋರುತ್ತಿದ್ದ ಚಂಡೀದಾಸನೆಂಬ ಒಬ್ಬ ತರುಣ ಅಧಿಕಾರಿಗೆ ಈ ಕೆಲಸವನ್ನು ಅವರು ವಹಿಸಿದರು. ಅನುಭವದ ಆಧಾರದ ಮೇಲಿಂದ ದೊಡ್ಡ ಹುದ್ದೆಯನ್ನು ವೀರಯ್ಯನವರು ಅಲಂಕರಿಸಿದ್ದರೆ

ಚಂಡೀದಾಸನು ಕೇವಲ ಪೋಲೀಸ್ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಅಧಿಕಾರವನ್ನು ಪಡೆದಿದ್ದನು. ಹೀಗಾಗಿ ಆತನಲ್ಲಿ ಕೆಲಸದ ಬಗೆಗೆ ಇನ್ನೂ ಭ್ರಮನಿರಸನವಾಗಿರಲಿಲ್ಲ. ನರಸಿಂಹಮೂರ್ತಿಗಳು ಯಾರೆಂಬುದರ ಸುಳಿವು ಆತನಿಗೆ ಅಲ್ಪ ಸ್ವಲ್ಪವಾಗಿ ಇತ್ತು. ವಿಶ್ವವಿದ್ಯಾನಿಲಯದ ಪ್ರೊಫೆಸರ್ ಸ್ಥಾನದಿಂದ ಇನ್ನೇನು ನಿವೃತ್ತರಾಗಬೇಕೆನ್ನುತ್ತಿದ್ದ ನರಸಿಂಹಮೂರ್ತಿಗಳ ಅಪಹರಣವನ್ನು ಕುರಿತು ಮೊದಲು ವಿಶ್ವವಿದ್ಯಾನಿಲಯದಲ್ಲಿಯೇ ತನಿಖೆಯನ್ನು ನಡೆಯಿಸಬೇಕು ಎಂದುಕೊಂಡ ಚಂಡೀದಾಸ. ಆ ಪ್ರಕಾರವಾಗಿ ಇಲಾಖೆಯ ಜೀಪನ್ನು ತೆಗೆದುಕೊಂಡು ಸಾಮಾನ್ಯ ವ್ಯಕ್ತಿಯಂತೆ ಆತನು ವಿಶ್ವವಿದ್ಯಾನಿಲಯದತ್ತ ಹೊರಟ.

ವಿಶ್ವವಿದ್ಯಾನಿಲಯದಲ್ಲಿ ನರಸಿಂಹಮೂರ್ತಿಗಳು ಕೆಲಸ ಮಾಡುತ್ತಿದ್ದ ವಿಭಾಗವು ಮೌನದಿಂದ ತುಂಬಿದ ಸ್ಮಶಾನದಂತಿತ್ತು. ನರಸಿಂಹಮೂರ್ತಿಗಳ ಅಪಹರಣದಿಂದಾಗಿ ಎಲ್ಲರೂ ದುಃಖಿತರಾಗಿದ್ದಾರೆ ಎಂದುಕೊಂಡ ಚಂಡೀದಾಸ. ಯಾವ ಕೊಠಡಿಯಲ್ಲಿ ಇಣಿಕಿದರೂ ಕೇವಲ ಮೇಜು–ಕುರ್ಚಿಗಳೇ ಎದುರಾಗುತ್ತಿದ್ದವು. ಕೊನೆಗೆ ತೂಕಡಿಸುತ್ತಾ ಕುಳಿತಿದ್ದ ಸೇವಕನ ಬಳಿ ಚಂಡೀದಾಸನು ಬಂದು ಆತನನ್ನು ಕೊಂಚ ಅಲುಗಾಡಿಸಿ ಎಬ್ಬಿಸಿದ. ಪೇದೆಯು ಭಾರಿ ನಿದ್ರಾಭಂಗವಾದವರಂತೆ 'ಏನು ಸ್ವಾಮಿ'? ಎಂದು ಕೇಳಿದ 'ಎಲ್ಲರೂ ಎಲ್ಲಿ'? ಎಂದು ವಿಚಾರಿಸಿದ ಚಂಡೀದಾಸ.

'ಎಲ್ಲರೂ ಎನ್ನಲು ಯಾರಿದ್ದಾರೆ ಸ್ವಾಮಿ ಇಲ್ಲಿ?.'

'ವಿದ್ಯಾರ್ಥಿಗಳು, ಶಿಕ್ಷಕರು ಇಲ್ಲವೇ ?'

'ಈ ಡಿಪಾರ್ಟ್‌ಮೆಂಟ್‌ನಾಗೆ ಮೂರು ಟೂಡೆಂಟ್ಸ್ ಅವರೆ. ಅವರೆಲ್ಲ ಬೇರೆ ಬೇರೆ ಕೆಲಸದಲ್ಲಿ ಇದ್ದಾರೆ. ಅವರು ಇಲ್ಲಿ ಬರೋದು ಮೊದಲನೆ ಮತ್ತು ಪರೀಕ್ಷೆ ದಿನ. ಉಳಿದ ಮೇಷ್ಟ್ರುಗಳು ಈ ಊರಿನ ಸುತ್ತಲೂ ತೆಂಗಿನ ತೋಟ ಮಾಡಿಕೊಂಡು ಅವರೆ. ಸಂಬಳದ ದಿನ ಹೆಚ್ಚಿನವರು ಬರುತ್ತಾರೆ. ನರಸಿಂಹಮೂರ್ತಿಗಳು ಬರಬೇಕಿತ್ತು. ಅದು ಏಕೊ ಬಂದಿಲ್ಲ' ಎಂದು ಹೇಳಿ ಪೇದೆಯು ಯಥಾಪ್ರಕಾರ ಕಣ್ಣು ಮುಚ್ಚಿದ.

ಇಲ್ಲಿ ಯಾರಿಗೂ ನರಸಿಂಹಮೂರ್ತಿಗಳು ಅಪಹರಣವಾದ ವಿಷಯ

ತಿಳಿದಿಲ್ಲವೆಂದು ಚಂಡೀದಾಸನಿಗೆ ಖಚಿತವಾಯಿತು. ತನ್ನ ಪೋಲಿಸ್ ತರ್ಕ ಇಲ್ಲಿ ಸಫಲವಾಗುವುದಿಲ್ಲವೆಂಬ ಅರಿವು ಆತನಿಗೆ ಉಂಟಾಯಿತು.

೧೨

ಡಾ|| ಜನಾರ್ಧನರ ಮನೆಯಿಂದ ವೀರೇಂದ್ರ ಹೊರಬಿದ್ದೊಡನೆ ಆತನನ್ನು ಹಿಂಬಾಲಿಸುವ ಕ್ರಿಯೆ ಗುಂಡಪ್ಪನಿಗೆ ಸಾಧ್ಯವಾಗಲಿಲ್ಲ. ಏಕೆಂದರೆ ಡಾ|| ಜನಾರ್ಧನರು ವೀರೇಂದ್ರನನ್ನು ಬೀಳ್ಕೊಟ್ಟು ಗುಂಡಪ್ಪನೊಡನೆ ಪುರಾಣ ವಿಷಯಗಳ ಸಂಬಂಧವಾಗಿ ಬಹು ಗಹನವಾದ ಚರ್ಚೆಗೆ ತೊಡಗಿದರು. ಅವರ ಮಾತಿನ ತಳಬುಡವೂ ಗುಂಡಪ್ಪನಿಗೆ ಅರ್ಥವಾಗುತ್ತಿರಲಿಲ್ಲ. ಆದರೂ ಅವರು ಹೇಳಿದ್ದಕ್ಕೆಲ್ಲ ಸೈಗುಟ್ಟುತ್ತಾ ಗುಂಡಪ್ಪ ಕುಳಿತ. ಕೊನೆಗೆ ಅವರಿಂದ ಬಿಡುಗಡೆಯನ್ನು ಪಡೆದು ಹೊರಬಂದಾಗ ವೀರೇಂದ್ರನ ಕಾರು ಮಾಯವಾಗಿತ್ತು. ವೀರೇಂದ್ರ ಯಾರನ್ನು ಹುಡುಕುತ್ತಿರಬಹುದು ಎನ್ನುವ ಪ್ರಶ್ನೆ ಗುಂಡಪ್ಪನಲ್ಲಿ ಗಾಢವಾಗತೊಡಗಿತು. ಒಂದು ವೇಳೆ ವೀರೇಂದ್ರ ಒಬ್ಬ ಕದೀಮನಾಗಿದ್ದರೆ ಆತನು ಡಾ|| ಜನಾರ್ಧನರ ಬಳಿ ಸ್ನೇಹವನ್ನು ಇಟ್ಟುಕೊಂಡಿದ್ದ ವ್ಯಕ್ತಿಯೊಬ್ಬನನ್ನು ಏಕೆ ಹುಡುಕುತ್ತಿರಬಹುದು ಎನ್ನುವುದಂತೂ ಗುಂಡಪ್ಪನಿಗೆ ಬಹು ದೊಡ್ಡ ಸಮಸ್ಯೆಯಾಗಿ ಕಾಡಿತು.

ಇದೇ ಚಿಂತೆಯಲ್ಲಿ ಗುಂಡಪ್ಪ ತಾನು ಇಳಿದುಕೊಂಡಿದ್ದ ಹೋಟೆಲನ್ನು ಪ್ರವೇಶಿಸಿದ. ನಡೆದುದೆಲ್ಲವನ್ನೂ ಸಾದ್ಯಂತವಾಗಿ ಪ್ರಶಾಂತನಿಗೆ ವಿವರಿಸಿದ ನರಸಿಂಹಮೂರ್ತಿಗಳ ಅಪಹರಣಕ್ಕೂ ವೀರೇಂದ್ರ ಹುಡುಕುತ್ತಿರುವ ವ್ಯಕ್ತಿಗೂ ಏನೋ ಸಂಬಂಧ ಇದೆ ಎಂದು ಪ್ರಶಾಂತ ಭಾವಿಸಿದ. ಆದರೆ ಸಮಸ್ಯೆ ಎಳೆ ಎಳೆಯಾಗಿ ಸಿಕ್ಕುತ್ತಿತ್ತೆ ಹೊರತು ಕಳ್ಳ ಕದೀಮರಲ್ಲದ ವಿದ್ವಾಂಸರು ಇದರಲ್ಲಿ ಹೇಗೆ ಮತ್ತು ಏಕೆ ಭಾಗಿಯಾಗಿದ್ದಾರೆ ? ಎನ್ನುವುದು ಮಾತ್ರ ತಿಳಿಯಲಾರದಂತಾಗಿತ್ತು. ಚಿಂತಾಮಗ್ನಳಾಗಿ ಕುಳಿತಿದ್ದ ರೀಟಾ 'ನನಗೊಂದು ಐಡಿಯಾ ಹೊಳೆದಿದೆ ಸಾರ್' ಎಂದಳು. 'ಏನು ?' ಎಂದು ಕೇಳಿದ ಪ್ರಶಾಂತ.

'ಒಟ್ಟು ಮನುಷ್ಯ ಪುರಾಣದ ಸುತ್ತಲೂ ತಿರುಗುತ್ತಿದೆಯಲ್ಲವೇ ?' ಎಂದು ಕೇಳಿದಳು.

'ಅದು ಸ್ಪಷ್ಟವಾಗಿದೆ' ಎಂದ ಪ್ರಶಾಂತ.

'ಹಾಗಿದ್ದರೆ ಪುರಾಣ, ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ಒಂದು ದಾಖಲೆ ನಮ್ಮ ಬಳಿ ಇವೆ ಎಂದು ಪ್ರಚುರ ಪಡಿಸಿದರೆ ಇವರೆಲ್ಲಾ ದುಂಬಿಗಳಂತೆ ನಮ್ಮ ಬಳಿ ಬರಬಹುದಲ್ಲವೆ ?' ಎಂದಳು. ಪ್ರಶಾಂತನಿಗೆ ಇದು ಸರಿಯಾದ ಯೋಚನೆ ಎಂದು ಅನ್ನಿಸಿತು. ಕೂಡಲೆ 'ಜನಯುಗ' ಪತ್ರಿಕೆಯ ಸಂಪಾದಕರಿಗೆ ಫೋನ್ ಮಾಡಿದ. ಅಲ್ಲಿಗೆ ಬರುವುದಾಗಿ ತಿಳಿಸಿದ. ಆ ಪತ್ರಿಕೆಯ ಸಂಪಾದಕರು ಪ್ರಶಾಂತನ ಪರಿಚಯದವರೇ ಆದುದರಿಂದ ಅತಿ ಪುರಾತನವಾದ ದಾಖಲೆಯೊಂದು ಪ್ರಶಾಂತನ ಬಳಿ ಇದೆಯೆಂದು ಪ್ರಕಟಿಸುವುದು ಕಷ್ಟವೇನೂ ಆಗಲಿಲ್ಲ.

ಮರುದಿನದ ಪತ್ರಿಕೆಯಲ್ಲಿ ರಾವ್ ಅರ್ಥಾತ್ ಅಪೇಕ್ಷಗಾಮಿ ಈ ಸುದ್ದಿಯನ್ನು ಓದಿ ತನ್ನ ಬಂಧನದಲ್ಲಿದ್ದ ನರಸಿಂಹಮೂರ್ತಿಗಳಿಗೆ ಪತ್ರಿಕೆಯನ್ನು ಓದಲು ಕೊಟ್ಟ. ಗಾಮಾನ ಸಂಗಾತಿಯಾದ ಸರಸ್ವತಿಗೆ ಈ ಸುದ್ದಿಯಲ್ಲಿ ತುಂಬಾ ಆಸ್ಥೆ ಹುಟ್ಟಿತು. ಆದರೆ ನರಸಿಂಹಮೂರ್ತಿಗಳು ಮಾತ್ರ 'ಇದೊಂದು ಹಸಿ ಸುಳ್ಳು ಸುದ್ದಿ' ಎಂದು ಪತ್ರಿಕೆಯನ್ನು ಬೀಸಾಕಿದರು.

'ಮೂರ್ತಿಗಳೇ ನಿಮ್ಮನ್ನು ನಾನು ಈ ಅಜ್ಞಾತ ತಾಣಕ್ಕೆ ಕರೆದು ಕೊಂಡು ಬಂದಿರುವುದು ನಿಮಗೆ ದುಃಖವನ್ನುಂಟುಮಾಡಿದೆ ನಿಜ. ಆದರೆ ಸತ್ಯಶೋಧಕರಾದ ನೀವು ನನ್ನ ಮಾತನ್ನು ನಂಬಬೇಕು. ನಿಮ್ಮ ದೇಶದ ಮೌಲ್ಯದ ಅವನತಿ ಎಲ್ಲಿ ಪ್ರಾರಂಭವಾಗಿದೆ ಎಂಬುದನ್ನು ಕಂಡು ಹಿಡಿಯಲು ನಾನು ಕಷ್ಟಪಡುತ್ತಿದ್ದೇನೆ ನಿಮ್ಮ ಸುತ್ತಲೂ ತುಂಬಿರುವ ಅಜ್ಞಾನ, ಬಡತನ ಅವನತಿಗಳನ್ನು ನೋಡಿರಿ. ಕೇವಲ ಪುರಾಣ ಸಂಸ್ಕೃತಿಗಳ ಅಧ್ಯಯನವನ್ನು ಮಾಡುತ್ತಾ ಜೀವನವನ್ನು ಸವೆಯಿಸಿದ ನಿಮ್ಮಂಥವರಿಂದ ನಿಮ್ಮ ಸಮಾಜಕ್ಕೆ ಅದೇನು ಉಪಕಾರವಾಗಿದೆ ಹೇಳಿ ?'

ನರಸಿಂಹಮೂರ್ತಿಗಳು ಎದ್ದು ನಿಂತು ರೂಮಿನಲ್ಲಿ ಶತಪಥಿಸುತ್ತಾ ಮಾತನಾಡತೊಡಗಿದರು. 'ನಮ್ಮಂಥವರಿಂದ ಸಮಾಜಕ್ಕೆ ತತ್ಕಾಲದಲ್ಲಿ

ಪ್ರಯೋಜನವಿಲ್ಲದಿರಬಹುದು. ಆದರೆ ದೀರ್ಘ ಕಾಲದಲ್ಲಿ ನಮ್ಮ ಸಂಶೋಧ
ಗಳು ಸಮಾಜಕ್ಕೆ ಸಹಜವಾಗಿಯೇ ಸಹಾಯಕವಾಗುತ್ತವೆ'.

'ಅಲ್ಲಿಯೇ ನೀವು ತಪ್ಪು ದು. ಭ್ರಷ್ಟಾಚಾರದ ಭಾರದಿಂದ ಬಾ
ನಲಗುತ್ತಿರುವ ಬಡವನ ಇಂದಿನ ಸ್ಥಿತಿಗೆ ಕಣ್ಣುಮುಚ್ಚಿ ನಾಳಿನ ಭವ
ಬಂಗಾರ ಯುಗದ ಕನಸು ಕಾಣುತ್ತಿರುವ ಹೇಡಿಗಳು ನೀವು'!

ಗಾಮೂನ ಈ ಮಾತು ನರಸಿಂಹಮೂರ್ತಿಗಳ ಮರ್ಮಕ್ಕೆ ತಾಗಿತು.

'ಆದರೆ ನನ್ನಂಥವರು ಸಮಾಜಕಲ್ಯಾಣ ಕಾರ್ಯಕ್ಕೆ ಕೈ ಹಾಕಿ
ಸಂಶೋಧನೆಯನ್ನು ಬದಿಗೊತ್ತಬೇಕೆ?' ಎಂದು ಕೇಳಿದರು. 'ಅದು ನಿಮಗೆ
ಬಿಟ್ಟ ವಿಷಯ, ಆದರೆ ನಿಮ್ಮ ಸಹಾಯವಿರುವವರೆಗೆ ನೀವು ನನ್ನ ಕಣ್ಣು
ತಪ್ಪಿಸಿ ಹೋಗಲಾರಿರಿ'? ಎಂದ ಗಾಮು.

೧೩

ವೀರೇಂದ್ರ, ಗುರು ಮತ್ತು ಶಾಂತಲಾ ದೀರ್ಘ ಸಮಾಲೋಚನೆಯಲ್ಲಿ
ತೊಡಗಿದ್ದರು. ನರಸಿಂಹಮೂರ್ತಿಗಳನ್ನು ಅಪೆಕ್ಸಗಾಮು ಅಪಹರಿಸಿದ್ದಾನೆ
ಎನ್ನುವುದರಲ್ಲಿ ಈಗ ಸಂಶಯವೇ ಉಳಿದಿರಲಿಲ್ಲ ಅದರಲ್ಲಿ. ಆದರೆ ಪುರಾತನ
ದಾಖಲೆಯೊಂದು ಪ್ರಶಾಂತನ ಬಳಿ ಇರುವುದೆಂಬ ಸುದ್ದಿ ಮಾತ್ರ ಅವರಿಗೆ
ಆಶ್ಚರ್ಯವನ್ನುಂಟುಮಾಡಿತ್ತು. ಆ ಸುದ್ದಿಯ ಸುಳಿವು ಹಿಡಿದು ಅಪೆಕ್ಸ
ಗಾಮು ಪ್ರಶಾಂತನ ಭೇಟಿಗೆ ಬರುವುದರಲ್ಲಿ ಅವರಿಗೆ ಸಂಶಯವಿರಲಿಲ್ಲ ಆದರೆ
ತಾವು ಕೂಡ ಪ್ರಶಾಂತನ ಬಳಿ ಹೋಗಬೇಕೆ ಎನ್ನುವುದನ್ನು ತೀರ್ಮಾನಿಸಲು
ಅವರಿಗೆ ಇನ್ನು ಆಗಿರಲಿಲ್ಲ. ಕೊನೆಗೆ ವೀರೇಂದ್ರ ಪ್ರಶಾಂತನನ್ನು ಕಾಣ
ಬೇಕೆಂದು ನಿರ್ಧರಿಸಿಕೊಂಡರು. ಹಾಗೆಯೇ ಗುರು ಮತ್ತು ಶಾಂತಲಾ
ಗಾಮುನ ಬರುವನ್ನು ನಿರೀಕ್ಷಿಸಿ ಪ್ರಶಾಂತ ಇಳಿದುಕೊಂಡ ಹೋಟೆಲ್ ಬಳಿ
ಹದ್ದಿನ ಕಣ್ಣನ್ನು ಇಡಬೇಕೆಂದು ನಿರ್ಧರಿಸಲಾಯಿತು.

ಪ್ರಶಾಂತ ಪ್ರಕಟಿಸಿದ ಸುದ್ದಿ ವೀರಯ್ಯ ಮತ್ತು ಚಂಡೀದಾಸರಲ್ಲಿ
ಕುತೂಹಲವನ್ನು ಹುಟ್ಟಿಸಿತ್ತು. ನರಸಿಂಹಮೂರ್ತಿಗಳ ಅಪಹರಣಕ್ಕೂ ಈ

ಸುದ್ದಿಗೂ ಸಂಬಂಧವಿದೆಯೆಂದು ಚಂಡೀದಾಸ ಲೆಕ್ಕ ಹಾಕತೊಡಗಿದ್ದ. ಪ್ರಶಾಂತ ತನ್ನ ಪರಿಚಯದವರ ಮನೆಯಿಂದ ಹಳೆಯ ಕಲ್ಲುಗಳು ಮತ್ತು ತಾಳೇ ಗರಿಗಳನ್ನು ತಂದು ಅದರ ಮೇಲೆ ಶಿಲಾಯುಗದ ಚಿತ್ರಗಳಂಥ ಆಕೃತಿಗಳನ್ನ ಬಿಡಿಸುವುದರಲ್ಲಿ ತೊಡಗಿದ್ದ.

ಪ್ರಶಾಂತನ ಭೇಟಿಗೆ ಮೊದಲು ಬಂದವನೇ ಅಪೆಕ್ಸಗಾನು. ಆತನು ಕಲ್ಲುಗಳನ್ನು ಮತ್ತು ತಾಳೇ ಗರಿಗಳನ್ನು ಸೂಕ್ಷ್ಮವಾಗಿ ವೀಕ್ಷಿಸಿ 'ಇವು ಸರಕಾರದ ಆಸ್ತಿಗಳಾಗಬೇಕಲ್ಲವೇ'? ಎಂದ.

'ಹೌದು. ಆದರೆ ಆಸಕ್ತಿಯುಳ್ಳವರೆಲ್ಲ ವೀಕ್ಷಿಸಿದ ಮೇಲೆ ಸರಕಾರಕ್ಕೆ ಕೊಡುವುದೆಂದು ನಿರ್ಧರಿಸಿದ್ದೇವೆ' ಎಂದ ಪ್ರಶಾಂತ. ಈ ಉತ್ತರದಿಂದ ಗಾಮಾನಿಗೆ ಸಮಾಧಾನವಾದಂತೆ ತೋರಲಿಲ್ಲ.

ನಂತರ ವೀರೇಂದ್ರ ಪ್ರವೇಶಿಸಿ ಕಲ್ಲು ಮತ್ತು ತಾಳೇಗರಿಗಳನ್ನು ಪರೀಕ್ಷಿಸಿದ. ಆದರೆ ಗುಂಡಪ್ಪ ಅಲ್ಲಿ ಇರುವುದನ್ನು ಕಂಡು ಆತನಿಗೆ ಬಹಳ ಆಶ್ಚರ್ಯವೇ ಆಯಿತು. ಗುಂಡಪ್ಪನಿಗೂ ಸಹ ಈ ಆಸಾಮಿ ಬಂದುದನ್ನು ಕಂಡು ಸಂತೋಷವಾಯಿತು. ಏಕೆಂದರೆ ಈ ಪ್ರಕರಣದಲ್ಲಿ ವೀರೇಂದ್ರನಂಥ ಎಷ್ಟು ಜನ ತೊಡಗಿದ್ದಾರೆ ಎನ್ನುವುದನ್ನು ತಿಳಿಯುವುದೇ ಬಹು ಮುಖ್ಯ ಉದ್ದೇಶವಾಗಿತ್ತು.

ರಾವ್ ಅಥವಾ ಗಾಮ ಹೋಟೆಲನ್ನು ಬಿಟ್ಟೊಡನೆ ಎರಡು ಕಾರುಗಳು ಅವರ ಕಾರನ್ನು ಹಿಂಬಾಲಿಸಿದವು. ಮೊದಲ ಕಾರಿನಲ್ಲಿ ಶಾಂತಲಾವತ್ಸನ್ ಇದ್ದರೆ ಎರಡನೆಯ ಕಾರಿನಲ್ಲಿ ರೀಟಾ ಇದ್ದಳು. ಎರಡೂ ಕಾರುಗಳು ಗಾಮಾನ ಕಾರು ಹಿಂಬಾಲಿಸುತ್ತಾ ಊರ ಹೊರವಲಯವನ್ನು ದಾಟಿದವು. ಗಾಮಾನ ಕಾರು ವೇಗವನ್ನು ಹೆಚ್ಚಿಸುತ್ತಾ ಒಂದು ತಿರುವಿನಲ್ಲಿ ಕಣ್ಮರೆಯಾಯಿತು, ಶಾಂತಲಾಳ ಕಾರು ಗಾಮಾನ ಕಾರಿನ ವಿರುದ್ಧ ದಿಸೆಯಲ್ಲಿ ಟಿಸಿಲೊಡೆದ ಒಂದು ಕಾಲುದಾರಿಯಲ್ಲಿ ನುಗ್ಗಿತು. ಇದಕ್ಕೆ ಕಾರಣವೆಂದರೆ ಗಾಮಾ ತನ್ನ ರಾಡಾರನ್ನು ವಿರುದ್ಧ ದಿಸೆಯಲ್ಲಿ ತಿರುಗಿಸಿದ್ದ. ಮೋಸ ಹೋದ ಶಾಂತಲಾ ಗಾಮಾನಿಂದ ವಿರುದ್ಧ ದಿಸೆಯಲ್ಲಿ ಹೊರಟು ಹೋಗಿದ್ದಳು. ಆದರೆ ಇದೊಂದನ್ನೂ ತಿಳಿಯದ ರೀಟಾ ರಸ್ತೆಯ ಅಂಚಿಗೆ ತನ್ನ ಕಾರನ್ನು ನಿಲ್ಲಿಸಿ ತನ್ನ ಮುಂದಿನ ಕಾರು ಎಲ್ಲಿ ಹೋಗಿರಬಹುದು ಎಂದು

ಯೋಚಿಸುತ್ತಾ ಕುಳಿತಿದ್ದಳು. ಇಷ್ಟರಲ್ಲಿ ಗಾಮಾನ ಕಾರು ರಸ್ತೆಯ ಒಂದು ಬದಿಯಲ್ಲಿ ಮತ್ತೆ ಪ್ರತ್ಯಕ್ಷವಾಗಿ ಹೊರಟಿತು. ಕೂಡಲೇ ಅದನ್ನು ಹಿಂಬಾಲಿಸಿದರೆ ಸಂಶಯ ಬರುವುದೆಂದು ಅರಿತ ರೀಟಾಳು ತನ್ನ ಕಾರನ್ನು ಬೇರೊಂದು ದಿಸೆಯಲ್ಲಿ ತಿರುಗಿಸಿ ಬೆಟ್ಟವೊಂದರ ತುದಿಗೆ ಹೋಗಿ ನಿಂತಳು. ಅಲ್ಲಿಂದ ಬೆಟ್ಟದ ಎಡಬಲಗಳಲ್ಲಿ ಹೋಗುತ್ತಿದ್ದ ಪ್ರತಿಯೊಂದು ವಾಹನವನ್ನು ವೀಕ್ಷಿಸಬಹುದಾಗಿತ್ತು. ಹೀಗಾಗಿ ಗಾಮಾನ ಕಾರು ದೂರದ ಬೆಟ್ಟವೊಂದರ ಪಕ್ಕದಲ್ಲಿ ಕಲ್ಲಿನ ಗುಹೆಯಾಕಾರದ ಜಾಗದ ಮುಂದೆ ನಿಂತಿದ್ದನ್ನು ಅವಳು ಕಂಡಳು.

೧೪

ಬೆಂಗಳೂರಿನ ಹೊರ ವಲಯದಲ್ಲಿ ರೀಟಾ ಗುರುತಿಸಿದ ಸ್ಥಳಕ್ಕೆ ಪ್ರಶಾಂತ ಮತ್ತು ಗುಂಡಪ್ಪ ಭೇಟಿಕೊಡಲು ನಿರ್ಧರಿಸಿದರು. ಆದರೆ ಹೋಗುವ ಮೊದಲು ಹಲವಾರು ಪ್ರಶ್ನೆಗಳು ಅವರನ್ನು ಬಾಧಿಸಿದವು. ಒಂದು ವೇಳೆ ಯೋಗಿ ನರೇಂದ್ರನು ಹೇಳಿದಂತೆ ರಾವ್ ಅನ್ಯಲೋಕದ ಜೀವಿಯೇ ಆಗಿದ್ದರೆ ನಾವು ಅಪಾಯವನ್ನು ಎದುರಿಸಲು ಏನು ಕ್ರಮ ಕೈಗೊಳ್ಳಬೇಕು ಎನ್ನುವುದು ಅವರ ಬಹು ಮುಖ್ಯ ಸಮಸ್ಯೆಯಾಗಿತ್ತು. ಆದರೆ ಮಾನವ ರೂಪಿಗಳಾದ ತಾವು ಅನ್ಯಲೋಕದ ಜೀವಿಗಳೊಡನೆ ವ್ಯವಹರಿಸುವುದಕ್ಕೆ ನಿರ್ದಿಷ್ಟವಾದ ದಾರಿ ಯಾವುದೂ ಅವರಿಗೆ ತೋರಲಿಲ್ಲ. ರಿವಾಲ್ವರ್‌ಗಳನ್ನೇನೋ ತೆಗೆದುಕೊಂಡು ಹೋಗುವುದು ಸಹಜವಾದುದರಿಂದ ಅವುಗಳನ್ನು ತಮ್ಮ ಪಟ್ಟಿಗೆ ಸೇರಿಸಿಕೊಂಡರು. ಆದರೆ ಉಳಿದ ಯಾವ ವಸ್ತುಗಳನ್ನೂ ಖಚಿತವಾಗಿ ಒಯ್ಯಲು ಅವರು ಅಸಮರ್ಥರಾದರು.

ರೀಟಾ ತನ್ನ ವಾಸಸ್ಥಾನವನ್ನು ಗುರುತಿಸಿದ್ದಾಳೆ ಎನ್ನುವುದರ ಬಗೆಗೆ ಅಪೆಕ್ಸಗಾಮಾನಿಗೆ ಅರಿವಿರಲಿಲ್ಲ. ಆದರೆ ಮಾನವ ಜೀವಿಗಳು ತನ್ನ ವಾಸಸ್ಥಾನವನ್ನು ಗುರುತಿಸಿದಾಗ ಬಂದೊದಗುವ ಅಪಾಯಗಳನ್ನು ಆತನು ಮೊದಲೇ ನಿರ್ಧರಿಸಿ ಅದಕ್ಕೆ ತಕ್ಕ ಉಪಾಯುಗಳನ್ನು ಕೈಗೊಂಡಿದ್ದ. ತನಗೆ ಬೇಡವಾದ ಮಾನವ ಜೀವಿಗಳು ತನ್ನ ಗುಹೆಯನ್ನು ಪ್ರವೇಶಿಸಿದೊಡನೆ ಅಂತರ್ಧಾನನಾಗುವುದು (ಮಾಯವಾಗುವುದು), ಬೆಳಕಿನ ಸ್ವರೂಪವನ್ನು

ಪಡೆಯುವುದು, ಮಾತು ಮಾತ್ರ ಕೇಳಿಸುವಂತೆ ವ್ಯವಸ್ಥೆ ಮಾಡುವುದು ಮತ್ತು ತನ್ನ ಸಂಗಾತಿ ಸರಸ್ವತಿಯ ಮೂಲಕ ಮಾತ್ರ ಮಾತನಾಡುವುದು ಮುಂತಾ ದವುಗಳು ಇಂಥ ಉಪಾಯಗಳಲ್ಲಿ ಕೆಲವು ಆಗಿದ್ದವು.

ಪ್ರಶಾಂತ, ಗುಂಡಪ್ಪ ಮತ್ತು ರೀಟಾ ಅಪೇಕ್ಷಗಾಮಾನ ಗುಹೆಯನ್ನು ಸಮೀಪಿಸಿದಾಗ ಮಾನವ ಜೀವಿಗಳ ವಾಸಕ್ಕೆ ಯೋಗ್ಯ ಸ್ಥಳ ಅದು ಅನ್ನಿಸಲಿಲ್ಲ. ಕಲ್ಲಿನಿಂದ ಕೂಡಿದ್ದ ಆ ಬೆಟ್ಟದಲ್ಲಿ ರಾವ್‌ನಂಥ ವ್ಯಕ್ತಿ ವಾಸಿಸುತ್ತಾರೆ ಎಂದರೆ ನಂಬುವುದು ಅಸಾಧ್ಯ ಆಗಿತ್ತು. ಕೆಲ ಸಮಯ ಮೂವರೂ ಸುತ್ತಲೂ ಓಡಾಡಿ ಆ ಸ್ಥಳವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರು. ಆದರೆ ಕಲ್ಲಿನ ಖಾಲಿ ಗುಹೆಗಳ ಹೊರತಾಗಿ ಅವರಿಗೆ ಬೇರೇನೂ ಕಾಣಿಸಲಿಲ್ಲ. ಇಷ್ಟರಲ್ಲಿ ಗುಂಡಪ್ಪ ಕಾರಿನ ಟಯರುಗಳನ್ನು ಅಲ್ಲಲ್ಲಿ ನೆಲದ ಮೇಲೆ ಗುರುತಿಸಿದ್ದ. ಅದರ ಸುಳಿವನ್ನು ಹಿಡಿದು ಮೂವರೂ ಅದೇ ಜಾಡಿನಲ್ಲಿ ನಡೆಯುತ್ತಾ ಕೆಲವು ದೂರ ಹೋದರು. ಆಗ ಅವರಿಗೆ ಕಲ್ಲಿನ ಚಿಕ್ಕ ಗುಡಿಸಲಿನಾಕಾರದ ಮನೆಯೊಂದು ಕಣ್ಣಿಗೆ ಬಿದ್ದಿತು. ಮನೆಯಲ್ಲಿ ಒಳಹೊಕ್ಕು ನೋಡಿದರೆ ಎಲ್ಲವೂ ಖಾಲಿಯಾಗೇ ಇತ್ತು. ಒಂದು ಗಂಟೆ ಆ ಚಿಕ್ಕ ಕೊಠಡಿಯನ್ನು ಮೂವರೂ ಅಂಗುಲ ಅಂಗುಲ ಪರೀಕ್ಷಿಸಿದ ನಂತರ ರೀಟಾಳಿಗೆ ಆ ಕೊಠಡಿಯ ಒಂದು ಕಲ್ಲು ಸಡಿ ಲಾಗಿರುವುದು ಕಂಡು ಬಂದಿತು. ಮೂವರೂ ಸೇರಿ ಆ ಕಲ್ಲನ್ನು ಹೊರ ತೆಗೆದರು. ಅದರ ಹಿಂದೆ ಆಧುನಿಕ ವಿದ್ಯುತ್ ಗುಂಡಿಯೊಂದು ಕಂಡು ಬಂದಿತು. ಪ್ರಶಾಂತನು ಗುಂಡಿಯನ್ನು ಅದುಮಿದನು. ಕೂಡಲೇ ಆ ಗುಡಿಸಲು ಇಬ್ಭಾಗವಾಗಿ ಒಂದು ಕಾರು ಸಲೀಸಾಗಿ ಒಳಗೆ ಹೋಗಬಹುದಾ ದಂಥ ರಸ್ತೆಯೊಂದು ಕಂಡುಬಂದಿತು. ಮೂವರಿಗೂ ಒಮ್ಮೆಲೇ ಭಯಮಿಶ್ರಿತ ಆಶ್ಚರ್ಯವಾಯಿತು.

'ರಾವ್ ಒಬ್ಬರೇ ಇದೆಲ್ಲವನ್ನು ನಿರ್ಮಿಸಲು ಸಾಧ್ಯವೆ ?' ಎಂದು ಗುಂಡಪ್ಪ ಕೇಳಿದ.

'ಆತ ಅನ್ಯಲೋಕದ ಜೀವಿ ಎಂಬುದನ್ನು ಮರೆಯಬೇಡ ಗುಂಡಪ್ಪ' ಎಂದ ಪ್ರಶಾಂತ.

ಇಂಥ ಭಯಾನಕ ಪ್ರಸಂಗಗಳನ್ನು ಎದುರಿಸುವಲ್ಲಿ ಮೂವರೂ ಪಳಗಿದುದರಿಂದ ಅವರು ಆ ರಸ್ತೆಯಲ್ಲಿ ಇಳಿದು ಮುಂದೆ ನಡೆಯತೊಡಗಿದರು.

ಇವರು ನಾಲ್ಕು ಹೆಜ್ಜೆಗಳನ್ನು ಕ್ರಮಿಸುವಷ್ಟರಲ್ಲಿ ಇವರು ಪ್ರವೇಶಿಸಿದ್ದ ದ್ವಾರವು ತಾನಾಗಿಯೇ ಮುಚ್ಚಿಕೊಂಡಿತ್ತು. 'ಗುಂಡಪ್ಪ ನಮ್ಮ ರಾವ್‌ಗೆ ನಾವು ಬಂದಿರುವ ವಿಷಯ ಈಗಾಗಲೇ ಗೊತ್ತಾಗಿದೆಯೆಂದು ತೋರುತ್ತದೆ' ಎಂದ ಪ್ರಶಾಂತ.

'ಹೀಗಾಗಿ ಚೆನ್ನಾದ ಆತಿಥ್ಯವೂ ಕಾದಿವೆ ಎಂದು ಕಾಣುತ್ತದೆ' ಎಂದ ಗುಂಡಪ್ಪ.

'ಅವರು ಭಾರತೀಯ ಪೋಲೀಸರಲ್ಲ. ಅನ್ಯಲೋಕ ಜೀವಿಗಳು.' ಎಂದಳು ರೀಟಾ.

ಅರ್ಧ ಫರ್ಲಾಂಗನಷ್ಟು ದೂರವನ್ನು ಆ ನೆಲಮಾಳಿಗೆಯ ರಸ್ತೆಯಲ್ಲಿ ನಡೆದ ಮೇಲೆ ಅವರಿಗೆ ಒಂದು ದೊಡ್ಡ ಆಧುನಿಕ ಕೊಠಡಿಯು ಎದುರಾಯಿತು. ಅಲ್ಲಿ ಎಲ್ಲ ತರಹದ ಆಧುನಿಕ ಸೌಕರ್ಯಗಳೂ ಇದ್ದವು. ಮೇಜು ಕುರ್ಚಿಗಳಷ್ಟೇ ಅಲ್ಲ ಒಂದು ಅತ್ಯಾಧುನಿಕ ಗ್ರಂಥ ಭಂಡಾರವೂ ಅಲ್ಲಿ ಇತ್ತು. ಇಷ್ಟೆಲ್ಲವನ್ನೂ ನಿರೀಕ್ಷಿಸಿರದಿದ್ದ ಈ ಮೂವರನ್ನೂ ಸರಸ್ವತಿಯು ಸ್ವಾಗತಿಸಿದಳು. ವೈರಿ ವಲಯವನ್ನು ಸೇರಿದಾಗ ರಿವಾಲ್ವರ್ ಮತ್ತು ಗುಂಡಿನ ಚಕಮಕಿಯನ್ನೇ ಕಂಡ ಈ ಪತ್ತೇದಾರಿ ಗುಂಪಿಗೆ ಸರಸ್ವತಿಯ ಸ್ವಾಗತವು ಅನಿರೀಕ್ಷಿತವಾಗಿತ್ತು. ಅವಳು ಮೂರನ್ನೂ ಸೋಫಾದ ಮೇಲೆ ಕೂಡ್ರಿಸಿ ಒಳ್ಳೆಯ ಕಾಫಿ ಮತ್ತು ಬಿಸ್ಕತ್ತುಗಳನ್ನು ಕೊಟ್ಟಳು.

'ತಾವು........?' ಎಂದು ಕೇಳಿದ ಪ್ರಶಾಂತನ ಮಾತನ್ನು ಅರ್ಧದಲ್ಲಿಯೇ ತಡೆದು ಸರಸ್ವತಿಯು 'ಈಗ ಎಲ್ಲವೂ ಗೊತ್ತಾಗುತ್ತದೆ' ಎಂದಳು. ಅವರು ಕಾಫಿ ಮತ್ತು ಬಿಸ್ಕತ್ತುಗಳನ್ನು ಮುಗಿಸುವ ಹೊತ್ತಿಗೆ ರಾವ್ ಮತ್ತು ನರಸಿಂಹಮೂರ್ತಿಗಳು ಪ್ರವೇಶಿಸಿದರು. ನರಸಿಂಹಮೂರ್ತಿಗಳನ್ನು ಅಲ್ಲಿ ಕಂಡು ತನ್ನ ಊಹೆ ಸರಿಯಾಗಿದೆ ಎಂದುಕೊಂಡ ಪ್ರಶಾಂತ. ನರಸಿಂಹ ಮೂರ್ತಿಗಳನ್ನು ಅಪಹರಿಸಿದ ಕದೀಮ ಹಾಗಾದರೆ ರಾವ್ ಎಂದು ತನ್ನಲ್ಲಿಯೇ ಅಂದುಕೊಂಡ ಗುಂಡಪ್ಪ. ರಾವ್ ಅನ್ಯಲೋಕದ ಜೀವಿ ಎಂದುಕೊಂಡಳು ರೀಟಾ.

'ನೋಡಿ, ನೀವು ನನ್ನ ವಾಸಸ್ಥಾನವನ್ನು ಪತ್ತೆಹಚ್ಚಿಬಿಟ್ಟಿರಿ. ಇನ್ನು

ನಿಮ್ಮನ್ನು ಹೊರಗೆ ಕಳುಹಿಸುವುದು ನನಗೆ ಅಪಾಯಕಾರಿ ' ಎಂದು ನಗುತ್ತಾ ನುಡಿದ ಅಪೆಕ್ಸಗಾಮ.

' ನಾವು ಯಾರಿಗೂ ಕೇಡು ಬಗೆಯಲು ಬಂದವರಲ್ಲ. ಪುರಾಣ ಇತಿಹಾಸಗಳ ಬಗೆಗೆ ಆಸ್ಥೆಯುಳ್ಳವರು ' ಎಂದಳು ರೀಟಾ.

ಈ ಮಾತನ್ನು ಕೇಳಿ ಅಪೆಕ್ಸಗಾಮ ಗಹಗಹಿಸಿ ನಗಲು ಪ್ರಾರಂಭಿಸಿದ. ನಗು ನಿಂತ ಮೇಲೆ ಹೇಳಿದ, ' ನರಸಿಂಹಮೂರ್ತಿಗಳೂ ನಿಮ್ಮಂಥ ಆಸ್ಥೆಯುಳ್ಳವರೇ, ನಿಮ್ಮ ಸಮಾಜದ ಒಟ್ಟು ಅವನತಿ ಎಲ್ಲಿಂದ ಪ್ರಾರಂಭವಾಗಿದೆ ಎಂದು ಕಂಡುಹಿಡಿಯಲು ಇಂಥ ವಿದ್ವಾಂಸರನ್ನು ಭೇಟಿಮಾಡಿದೆ. ಕೊನೆಗೆ ನರಸಿಂಹಮೂರ್ತಿಗಳನ್ನು ಅಪಹರಿಸಿದೆ. ಆದರೆ ಇದೆಲ್ಲವೂ ವ್ಯರ್ಥವೆಂದು ಈಗ ಅನ್ನಿಸುತ್ತದೆ. ಜೀವಂತ ಜನರ ಕಷ್ಟನಷ್ಟಗಳನ್ನು ಎಂದೂ ತಲೆಗೆ ಹಚ್ಚಿಕೊಳ್ಳದ ಇಂಥ ಜ್ಞಾನಿಗಳು ಇದ್ದರೂ ಅಷ್ಟೇ ಇಲ್ಲದಿದ್ದರೂ ಅಷ್ಟೆ. ಇವರ ಮೂಲಕ ನಿಮ್ಮ ಸಮಾಜದ ನ್ಯೂನ್ಯತೆಗಳನ್ನು ಕಂಡು ಹಿಡಿಯಬೇಕೆಂದು ನಾನು ಮಾಡಿದ ಪ್ರಯತ್ನವೆಲ್ಲವೂ ವ್ಯರ್ಥವಾಗಿದೆ. ಇನ್ನು ನೇರವಾದ ಮಾರ್ಗಕ್ಕೇ ನಾನು ಇಳಿಯಬೇಕು.'

' ನೀವು ಹೇಳುವ ಮಾತು ನಿಜವೇ ಇದ್ದರೆ. ಅನ್ಯಲೋಕ ಜೀವಿಗಳಾದ ನೀವು ನಮ್ಮ ಲೋಕದ ಬಗೆಗೆ ಇಷ್ಟೊಂದು ಕಾಳಜಿ ವಹಿಸಲು ಕಾರಣವೇನು ? ' ಎಂದು ಪ್ರಶಾಂತ ಕೇಳಿದ.

ಇದುವರೆಗೆ ಆವೇಶದಿಂದ ಮಾತನಾಡಿದ್ದ ಗಾಮಾ ಸಿಡಿಲೆರಗಿದವನಂತೆ ಸುಮ್ಮನೆ ಕುಳಿತುಬಿಟ್ಟ.

೧೫

ಊಟವಾದ ನಂತರ ಗಾಮಾ ತನ್ನ ಕಥೆಯನ್ನು ಹೇಳಲು ಪ್ರಾರಂಭಿಸಿದ. ' ನಾನು ಅನ್ಯಲೋಕ ಜೀವಿ ಎಂಬುದೇನೋ ನಿಜ. ಆದರೆ ಈ ವಿಸ್ತಾರವಾದ ತಾರಾಮಂಡಲದಲ್ಲಿ ಅನ್ಯಲೋಕ ಎಂಬ ಪದವೇ ಅರ್ಥ ಹೀನ. ನಿಮ್ಮ ಈ ಭೂಮಿಯಿಂದ ನೋಡಿದಾಗ ಹಲವಾರು ನಕ್ಷತ್ರಗಳು, ಗ್ರಹಗಳು ಕಾಣುತ್ತವೆ. ಆದರೆ ಅವುಗಳಲ್ಲಿ ಹೆಚ್ಚಿನವುಗಳಿಗೆ ನಿಮ್ಮ ಭೂಮಿಯಂಥಹ ಅಸ್ತಿತ್ವವೇ ಇಲ್ಲ. ಹೆಚ್ಚಿನವುಗಳು ಶಕ್ತಿಯ ಪುಂಜಗಳು. ಅವುಗಳಿಂದ ಬೆಳಕು

ಹೊರಸೂಸುತ್ತಿರುವ ಕಾರಣದಿಂದಾಗಿ ಅವುಗಳಿಗೂ ಭೂಮಿಯಂಥ ಅಸ್ತಿತ್ವವಿದೆ ಎಂದು ನಿಮ್ಮ ವಿಜ್ಞಾನಿಗಳು ಭಾವಿಸಿದ್ದಾರೆ. ಕಣ್ಣಿಗೆ ಕಾಣ ಶಕ್ತಿಯ ಪುಂಜಗಳಲ್ಲಿ ನಿಮ್ಮ ಕಣ್ಣಿಗೆ ಕಾಣದ ಜೀವಿಗಳ ಅಸ್ತಿತ್ವವನ ನಿಮ್ಮ ವಿಜ್ಞಾನಿಗಳು ಊಹಿಸುವುದೂ ಸಾಧ್ಯವಿಲ್ಲ. ಹಾಗೆ ನೋಡಿದ ಭೂಮಿಯ ಮೇಲೆ ಮನುಷ್ಯನನ್ನು ಸೃಷ್ಟಿಸಿದವರು ನಮ್ಮ ಲೋಕದ ಜನ ಕೋಟ್ಯಾಂತರ ವರುಷಗಳ ಹಿಂದೆ ಜೀವವೇ ಇಲ್ಲದಿದ್ದ ಈ ಸುಂದ ಭೂಮಿಗೆ ಬೆಳಕಿನ ರೂಪದ ನಮ್ಮ ಲೋಕದ ಜೀವಿಗಳು ಬಂದರು ಅವರು ಇಲ್ಲಿಂದ ಕೆಲವು ವಸ್ತುಗಳನ್ನು ಪಡೆಯಬೇಕಾಗಿತ್ತು. ತಮ್ಮ ಗುಲಾಮನಾಗಿ ಕೆಲಸ ಮಾಡಬಲ್ಲ ಒಂದು ಜೀವಿಯ ನಿರ್ಮಾಣದ ಪ್ರಯೋಗದಲ್ಲಿ ಅವರು ತೊಡಗಿದರು. ಆ ಪ್ರಯೋಗ ವಿವಿಧ ಹಂತ ಗಳೇ ನಿಮ್ಮ ದಶಾವತಾರಗಳು. ಕೊನೆಗೂ ಅವರ ಆಜ್ಞೆಯನ್ನು ಅನುಸರಿಸ ಬಲ್ಲ ಮಾನವನ ಸೃಷ್ಟಿಯಾಯಿತು. ಆ ಮಾನವನು ನಮ್ಮನ್ನೇ ದೇವರೆಂದು ಭಾವಿಸಿದ. ನಮ್ಮ ಹಲವಾರು ಗುಣಗಳು ನಾವು ಸೃಷ್ಟಿಸಿದ ಆ ಮಾನವ ನಲ್ಲಿಯೂ ಇದ್ದವು. ಆದರೆ ಬರುಬರುತ್ತಾ ನಮ್ಮ ಆಸ್ಥೆ ಈ ಲೋಕದಲ್ಲಿ ಕಡಿಮೆಯಾಗುತ್ತಾ ಹೋಯಿತು. ನಾವು ಸೃಷ್ಟಿಸಿದ ಮಾನವನ ಉತ್ಪಾದನೆ ತನ್ನಿಂದ ತಾನೇ ಆಗುವಂತೆ ಮಾಡುವುದು ನಮಗೆ ಅನಿವಾರ್ಯವೇ ಆಗಿತ್ತು. ಹೀಗಾಗಿ ಗಂಡು ಹೆಣ್ಣುಗಳೆಂಬ ಪ್ರಭೇಧವನ್ನು ಕಲ್ಪಿಸಿದವರೂ ನಾವೇ. ಬರುಬರುತ್ತಾ ಮಾನವನು ನಾವು ಯಾವ ಮೂಲರೂಪದಲ್ಲಿ ಕಾಣಿಸಿ ಕೊಂಡಿದ್ದೆವೋ ಅದೇ ಮೂಲರೂಪವನ್ನು ದೇವರೆಂದು ಬಗೆದು ಪೂಜಿಸ ತೊಡಗಿದ. ಆದರೆ ಈ ಮಧ್ಯದಲ್ಲಿ ಇನ್ನಾವುದೋ ಲೋಕದ ಜೀವಿಗಳು ಈ ಲೋಕವನ್ನು ಪ್ರವೇಶಿಸಿದಂತೆ ತೋರುತ್ತದೆ. ಏಕೆಂದರೆ ನಿಮ್ಮ ಲೋಕದ ಜೀವಿಗಳಲ್ಲಿ ಕೆಲವರಿಗೆ ದೇವರ ಸಾಕ್ಷಾತ್ಕಾರದ ಗುಟ್ಟು ತಿಳಿದುಬಿಟ್ಟದೆ. ವೈಜ್ಞಾನಿಕವಾಗಿ ಅತ್ಯಂತ ಮುಂದುವರಿದ ನಮಗೇ ತಿಳಿಯದ ಈ ಗುಟ್ಟು ನಿಮ್ಮಲ್ಲಿ ಕೆಲವು ಮಾನವರಿಗೆ ತಿಳಿದಿರುವುದು ನನ್ನಲ್ಲಿ ಕುತೂಹಲವನ್ನು ಹುಟ್ಟಿಸಿತು. ನಮ್ಮ ಜನರೊಡನೆ ಭೂಮಿಯ ಉಗಮ ವನ್ನು ಅಭ್ಯಸಿಸಲು ನಾನು ಇಲ್ಲಿಗೆ ಬಂದೆ. ವಿಜ್ಞಾನಕ್ಕೆ ಸೇರಿದ ಆ ವಿಷಯ ವನ್ನು ಅಭ್ಯಸಿಸುತ್ತಿರುವಾಗಲೇ ಭಾರತದ ಬಗೆಗೆ ನನ್ನಲ್ಲಿ ತೀವ್ರ ಆಸ್ಥೆ

ಅಂಕುರಿಸಿತು. ನಮಗೆ ತಿಳಿಯದ ಪರಮಾತ್ಮನ ಗುಟ್ಟು ಅವರಿಗೆ ತಿಳಿದಿದ್ದಿ
ತಲ್ಲದೆ ಅನ್ಯಲೋಕ ಜೀವಿಗಳನ್ನು ಗುರುತಿಸುವ ವಿಲಕ್ಷಣ ಶಕ್ತಿಯೊಂದು ಕೆಲ
ವರಲ್ಲಿ ಇರುವುದು ನನಗೆ ಗೊತ್ತಾಯಿತು. ನೀವು ಭೇಟಿ ಮಾಡಿ ಬಂದ
ಯೋಗಿ ನರೇಂದ್ರರು ಅಂಥವರಲ್ಲಿ ಒಬ್ಬರು. ಈ ವಿಷಯದಲ್ಲಿ ಆಳವಾಗಿ
ಅಭ್ಯಸಿಸಿದಂತೆ ನನ್ನ ಸ್ವಾತಂತ್ರ್ಯದ ಪರಿಮಿತಿಗಳ ಕೆಲವು ನನಗೆ ಆಗತೊಡ
ಗಿತು. ನನ್ನ ಲೋಕದ ಇತರ ಜನರು ನಿಮ್ಮ ಲೋಕದ ಜನರ ಕೆಲವು ವಿಶಿಷ್ಟ
ಶಕ್ತಿಗಳನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲ. ನಮ್ಮ ಲೋಕದ ಅತ್ಯುಚ್ಚ ಬುದ್ಧಿ
ಜೀವಿಗಳಲ್ಲಿ ಒಬ್ಬನಾದ ನಾನು ಸರ್ವಶಕ್ತನಾದ ಆ ಭಗವಂತನನ್ನು ಹುಡುಕ
ಬೇಕಾದರೆ ನನ್ನ ಗುಂಪಿನಿಂದ ಹೊರಬರಲೇ ಬೇಕಾಯಿತು.

ಈ ಸಂದರ್ಭದಲ್ಲಿ ನಮ್ಮ ಲೋಕದ ಸರಸ್ವತಿಯ ಪ್ರವೇಶ ನಿಮಗೆ
ಆಶ್ಚರ್ಯವನ್ನು ಹುಟ್ಟಿಸಿರಬಹುದು. ನಿಮ್ಮ ಲೋಕದ ಜನರಲ್ಲಿ ಪರಮಾತ್ಮ
ನನ ಸಾಕ್ಷಾತ್ಕಾರದ ಅರಿವು ಇದ್ದವರು ಮತ್ತು ಆ ಅರಿವು ಇಲ್ಲದವರು ಎಂಬ
ಭೇದವನ್ನು ಕುರಿತು ಅಭ್ಯಾಸ ಮಾಡುತ್ತಿದ್ದ ವ್ಯಕ್ತಿಯೊಂದರ ಅವಶ್ಯಕತೆ
ನನಗೆ ಇತ್ತು. ಅಂಥ ವ್ಯಕ್ತಿಯಾಗಿ ಸರಸ್ವತಿಯು ನನಗೆ ದೊರಕಿದಳು.
ಇದಲ್ಲದೆ ಪರಮಾತ್ಮನನ್ನು ಅರಿಯುವ ಹಲವಾರು ವಿಧಾನಗಳನ್ನು ಆವಳು ಸಾಧಿ
ಸಿದ್ದಳು. ಹುಟ್ಟಿನಿಂದಲೇ ಇಂಥ ಶಕ್ತಿಯನ್ನು ಪಡೆದ ಸರಸ್ವತಿಯು ನಾನು
ಅನ್ಯಲೋಕದ ಜೀವಿ ಎಂದು ಗೊತ್ತಿದ್ದರೂ ನಮ್ಮಿಬ್ಬರ ಗುರಿಗಳು ಒಂದೇ ಆದು
ದರಿಂದ ನನ್ನೊಡನೆ ಸಹಕರಿಸಲು ಒಪ್ಪಿದಳು.

ನಮ್ಮ ಲೋಕದ ಜೀವಿಗಳು ನನ್ನನ್ನು ಇಷ್ಟು ಸುಲಭವಾಗಿ ಈ ಕೆಲಸಕ್ಕೆ
ಬಿಡುವಂತಿರಲಿಲ್ಲ. ವೈಜ್ಞಾನಿಕವಾಗಿ ಬಹಳ ಮುಂದುವರಿದ ನಮ್ಮ ಲೋಕ
ದಲ್ಲಿ ಜೀವಿಗಳಲ್ಲಿಯೆ, ಹಲವಾರು ಭೇದಗಳಿವೆ. ಬುದ್ಧಿಯಿಂದ ಕೆಲಸಮಾಡುವ
ವರ್ಗ, ಕೇವಲ ತಂತ್ರಜ್ಞಾನವನ್ನು ತಿಳಿದವರ ಒಂದು ವರ್ಗ, ಬೇಹುಗಾರಿಕೆ
ಯಲ್ಲಿ ಪರಿಣತರಾದವರು ಹೀಗೆ ವಿವಿಧ ವಿಭಾಗಗಳೇ ಇವೆ. ಬುದ್ಧಿ ಜೀವಿ
ಗಳಲ್ಲೇ ಮತ್ತೆ ಪ್ರಭೇದಗಳಿವೆ. ಅವರಲ್ಲಿ ಕೆಲವರಿಗೆ ತಂತ್ರಜ್ಞಾನವೂ
ಗೊತ್ತಿದೆ. ಇವೆಲ್ಲವನ್ನೂ ಮೀರಿ ಸ್ವಂತ ಆಲೋಚನೆಯನ್ನು ಮಾಡಬಲ್ಲ
ಒಂದು ಸಣ್ಣ ಪಂಗಡವೂ ಇದೆ. ಇವರಿಗೆ ' ಲೋಕ ಕರ್ತೃ 'ಗಳೆಂದು
ಹೆಸರು. ಇಂಥ ಒಂದು ಗುಂಪಿಗೆ ಸೇರಿದವನು ನಾನು ಆದರೆ ಸ್ವಂತ

ಯೋಚನೆಯ ಜೀವಿಯೊಬ್ಬನು ಸಕಲ ಸೃಷ್ಟಿಕರ್ತನಾದ ದೇವನನ್ನು ಕುರಿತು ಯೋಚಿಸಬಹುದೆಂದು ನಮ್ಮವರು ಅರಿತಿಲ್ಲ. ಅವರಿಗೆ ತಮ್ಮ ಶಕ್ತಿಯ ಬಗೆಗೇ ಹೆಚ್ಚಿನ ಆಸ್ಥೆ ಮತ್ತು ನಂಬಿಕೆಗಳಿರುವುದರಿಂದ ತಮ್ಮನ್ನು ಮತ್ತು ತಮ್ಮ ಲೋಕವನ್ನು ಸೃಷ್ಟಿಸಿದ ದೇವರನ್ನು ಕುರಿತು ಆಸ್ಥೆ ವಹಿಸಲಿಲ್ಲ. ನಿಮ್ಮ ಲೋಕಕ್ಕೆ ಬರುತ್ತಿರುವುದು ನಾನು ಇದೇ ಮೊದಲ ಸಲವಲ್ಲ. ಈ ಮೊದಲು ಹಲವಾರು ಬಾರಿ ನಾನು ಇಲ್ಲಿಗೆ ಬಂದು ಹೋಗಿದ್ದೇನೆ. ಆದರೆ ಕಳೆದ ಬಾರಿ ಬಂದಾಗ ಮಾತ್ರ ನಮ್ಮವರೊಡನೆ ಮತ್ತೆ ನಮ್ಮ ಲೋಕಕ್ಕೆ ಮರಳುವ ಇಚ್ಛೆ ನನಗಿರಲಿಲ್ಲ. ನಮ್ಮವರಿಂದ ತಪ್ಪಿಸಿಕೊಂಡು ನಾನು ಇಲ್ಲಿಯೇ ಉಳಿದೆ. ನನ್ನನ್ನು ಹುಡುಕಲು ಅವರು ಸಾಕಷ್ಟು ಪ್ರಯತ್ನವನ್ನು ಮಾಡುತ್ತಿದ್ದಾರೆ. ಆದರೆ ಅವರಿಂದ ತಪ್ಪಿಸಿಕೊಳ್ಳಲು ಅವರಿಗಿಂತ ಉಚ್ಚ ಜೀವಿಯಾದ ನನಗೆ ಸಹಜವಾಗಿ ಸಾಧ್ಯವಾಗಿದೆ. ನೀವು ಈಗಾಗಲೇ ಅವರಲ್ಲಿ ಒಬ್ಬರನ್ನಾದರೂ ನೋಡಿರಬಹುದು.

ನಮ್ಮವರಿಂದ ತಪ್ಪಿಸಿಕೊಂಡ ಮೇಲೆ ಯೋಗ, ಪುರಾಣ, ಸನಾತನ ಕಥೆಗಳು ಇವುಗಳ ಮೂಲಕ ಸರ್ವಶಕ್ತ ಭಗವಂತನನ್ನು ಹುಡುಕಲು ಯತ್ನಿಸಿದೆ. ಆದರೆ ಇವೆಲ್ಲವುಗಳಲ್ಲಿ ನನ್ನ ಪ್ರಯತ್ನ ವಿಫಲವಾಯಿತು. ನರಸಿಂಹ ಮೂರ್ತಿಗಳ ಅಪಹರಣದ ಹಿಂದೆಯೂ ಇಂಥದೇ ಉದ್ದೇಶವಿತ್ತು. ಇಷ್ಟು ವರ್ಷಗಳವರೆಗೆ ಪುರಾತನ ಗುಟ್ಟು ತಿಳಿದಿರಬಹುದೆಂದು ಯೋಚಿಸಿದ್ದೆ. ಆದರೆ ನನ್ನ ಆಸೆ ನಿರಾಸೆಯಾಗಿದೆ. ಎನ್ನೊಂದೆಡೆ ಹೋಗಿ ನರೇಂದ್ರರಂಭನರ ಸಂಗವಲ್ಲಿ ಅವರು ಪಡೆದ ಜ್ಞಾನವನ್ನು ತಿಳಿಯಲು ಹಾತೊರೆದೆ. ಆದರೆ ಅವರ ಜ್ಞಾನವು ಭಾಷೆಯ ಮಟ್ಟವನ್ನು ಮೀರಿದ ಅನುಭವದಲ್ಲಿ ಮಾತ್ರ ನಿಜವಾಗುವ ಜ್ಞಾನವೆಂದು ಈಗ ತಿಳಿದುಬಂದಿದೆ. ಅವರಂಥ ಅನುಭವವನ್ನು ಪಡೆಯಲು ಅವರು ಮಾಡಿದ ಸಾಧನೆಯ ಗುಟ್ಟನ್ನು ನಾನಿನ್ನೂ ಕಂಡುಹಿಡಿಯಬೇಕಾಗಿದೆ.

ನಿಮ್ಮ ಯೋಗಿಗಳಿಗೆ ಇರಬಹುದಾದ ಅನೇಕ ಶಕ್ತಿಗಳು ನಮ್ಮ ಜೀವನದ ಅಂಗಗಳೇ ಆಗಿವೆ. ನಾನು ಬೆಳಕಿನ ರೂಪದವನು. ಇಲ್ಲಿ ನೋಡಿ ನನ್ನ ಮೂಲರೂಪವನ್ನು, ಎಂದು ಗಾನು ಬೆಳಕಿನ ರೂಪವನ್ನು ಧರಿಸಿದ. ಆತನು ನಿಂತಿದ್ದ ಸ್ಥಳದಲ್ಲಿ ಅದೇ ಆಕೃತಿಯ ಬೆಳಕಿನ ರೂಪವೊಂದು

ಮೂಡಿತು. ಕ್ರಮೇಣ ಆ ಬೆಳಕು ತನ್ನ ಆಕಾರವನ್ನು ಕಳೆದುಕೊಂಡು ಒಂದು ಬೆಳಕಿನ ಉದ್ದನೆಯ ಕೋಲಿನಂತಾಯಿತು. ನಂತರ ಅದೇ ಬೆಳಕಿನ ಕೋಲು ಬೆಳೆಯುತ್ತಾ ಕಂಬವಾಯಿತು. ಆ ಬೆಳಕಿನ ಕಂಬವೇ ಚಿಕ್ಕದಾಗುತ್ತಾ ಬೆಳಕಿನ ಬಿಂದುವಾಯಿತು. ಬಿಂದುವಿನಿಂದ ಅಗ್ನಿಯ ಕಿಡಿಗಳು ಸಿಡಿದವು. ನಂತರ ಯಾವುದರ ಅಸ್ತಿತ್ವವೂ ಇರಲಿಲ್ಲ. ಇದಾದ ನಂತರ ಕೆಲಕ್ಷಣಗಳಲ್ಲಿ ಗಾಮಾ ತಾನು ನಿಂತಿದ್ದ ಸ್ಥಳದಲ್ಲಿಯೇ ಕಂಡುಬಂದ. ಸರಸ್ವತಿಯೊಬ್ಬಳನ್ನು ಬಿಟ್ಟು ಉಳಿದೆಲ್ಲರಿಗೂ ಭಯಮಿಶ್ರಿತ ಆಶ್ಚರ್ಯವಾಗಿತ್ತು.

ಗಾಮಾ ತನ್ನ ಮಾತನ್ನು ಮುಂದುವರೆಸಿದ 'ನಾನು ಇಷ್ಟೆಲ್ಲ ಶಕ್ತಿಗಳನ್ನು ಪಡೆದಿದ್ದರೂ ನಿಮ್ಮ ಯೋಗಿಗಳಂತೆ ಇದರ ಮುಂದಿನ ಹೆಜ್ಜೆಯನ್ನು ತಿಳಿಯಲಾರದವನಾಗಿದ್ದೇನೆ. ಅದಕ್ಕೇ ಅನ್ನಿಸುತ್ತಿದೆ, ಈ ಲೋಕವನ್ನು ಮಧ್ಯದಲ್ಲಿ ಬೇರೆ ಯಾರೋ ಪ್ರವೇಶಿಸಿದ್ದರು ಎಂದು. ಈಗ ನನಗೆ ಉಳಿದಿರುವುದೊಂದೇ ದಾರಿ ಹಲವಾರು ವರುಷಗಳಿಂದ ಪ್ರಾಣದ ಆರಾಧನೆಯಲ್ಲಿ ತೊಡಗಿ ತಪಸ್ಸನ್ನು ಆಚರಿಸುತ್ತಿರುವ ಯೋಗಿಗಳನ್ನು ಭೇಟಿ ಮಾಡುವುದು.

ಗಾಮಾ ತನ್ನ ಮಾತನ್ನು ನಿಲ್ಲಿಸಿದಾಗ ಏನು ಹೇಳಬೇಕೆಂದು ಅಲ್ಲಿದ್ದ ಯಾರಿಗೂ ತೋಚಲಿಲ್ಲ.

ತಮ್ಮ ಜೀವನದ, ತಮ್ಮ ಲೋಕದ, ಅಷ್ಟೇ ಏಕೆ ಇಡೀ ವಿಶ್ವದ ಅವರ ಕಲ್ಪನೆಯೇ ಬದಲಾಗಿ ಹೋಗಿತ್ತು. ಕೊನೆಗೆ ಮೌನವನ್ನು ಮುರಿಯುತ್ತಾ ನರಸಿಂಹಮೂರ್ತಿಗಳು ಹೇಳಿದರು, 'ನಿಮ್ಮ ಅಗಾಧ ಜ್ಞಾನ, ಶಕ್ತಿ ಮತ್ತು ದೇವರ ದಾಹದ ಮುಂದೆ ನನ್ನ ಇಲ್ಲಿಯವರೆಗಿನ ಸಂಶೋಧನೆ ಅಭ್ಯಾಸಗಳೆಲ್ಲಾ ತೃಣ ಸಮಾನ ನಮ್ಮನ್ನು ಹೋಗಲು ಬಿಟ್ಟುಬಿಡಿ'.

ಕ್ಷಣಕಾಲದ ಮೌನದ ನಂತರ ಗಾಮಾ ಹೇಳಿದ 'ನನ್ನ ಅಸ್ತಿತ್ವವನ್ನು ಪೂರ್ತಿಯಾಗಿ ಅರಿತಿರುವವರು ನನ್ನ ಕೆಲಸವು ಪೂರ್ಣವಾಗಿ ಮುಗಿಯುವವರೆಗೆ ನನ್ನಿಂದ ದೂರ ಹೋಗಲು ಸಾಧ್ಯವೇ ಇಲ್ಲ.'

ಈ ಮಾತನ್ನು ಕೇಳಿ ಎಲ್ಲರೂ ದಿಗ್ಭ್ರಾಂತರಾಗಿ ಕುಳಿತರು.

೧೬

ಜಾರ್ಜ್, ಕಣ್ಣನ್ ಮತ್ತು ತಳವಾರ ನಿಂಗ ಈ ಮೂವರೂ
ಸುಪ್ರಸಿದ್ಧ ದರೋಡೆಕೋರರಾಗಿದ್ದರು. ಕ್ರಿಶ್ಚಿಯನ್‌ನಾದ ಜಾರ್ಜ್,
ಮಲೆಯಾಳಿಯಾದ ಕಣ್ಣನ್ ಮತ್ತು ಜಮಖಂಡಿಯ ರೈತನ ಮಗನಾದ
ತಳವಾರ ನಿಂಗ ಇವರು ಬಾಲ್ಯ ಸ್ನೇಹಿತರೇನೂ ಆಗಿರಲಿಲ್ಲ. ಅವರ ಸ್ನೇಹ
ಜೈಲಿನಲ್ಲೇ ಶುರುವಾಗಿತ್ತು. ಜಾರ್ಜ್ ಎಂಥ ಕಿಟಕಿಯ ಸರಳುಗಳನ್ನಾ
ದರೂ ಕತ್ತರಿಸುವಲ್ಲಿ ನಿಸ್ಸೀಮನಾಗಿದ್ದ. ಕಣ್ಣನ್ ಖೋಟಾ ನೋಟಿಗಾಗಿ
ಅತ್ಯುತ್ತಮ ಬ್ಲಾಕ್‌ಗಳನ್ನು ನಿರ್ಮಿಸಿ ದೇಶದಲ್ಲಿ ಈಗಾಗಲೇ ಹಲವಾರು
ಸಂಖ್ಯೆಯ ನೋಟುಗಳನ್ನು ಬಿಡುಗಡೆ ಮಾಡಿದ್ದ. ತಳವಾರ ನಿಂಗನು
ವ್ಯಕ್ತಿಗಳ ದೇಹದ ಮೇಲೆ ಕೊಂಚವೂ ಗುರುತಿಲ್ಲದೆ ಅವರನ್ನು ಕೊಲೆ
ಮಾಡುವ ಕಲೆಯಲ್ಲಿ ಪಳಗಿದ್ದ. ಬೆಳಗಾವಿಯ ಹಿಂಡಲಗಿ ಜೈಲಿನಲ್ಲಿ
ಮೂವರೂ ತಮ್ಮ ತಮ್ಮ ಕಸುಬಿನಲ್ಲಿ ಸ್ವಲ್ಪ ತಪ್ಪಿದ ಆಯದಿಂದಾಗಿ ಈಗ
ಒಂದು ವರುಷದ ಹಿಂದೆ ಬಂದು ಸೇರಿದ್ದರು ಆದರೆ ಜಾರ್ಜನ ಕೈಚಳಕದ
ಪರಿಣಾಮವಾಗಿ ಅಲ್ಲಿಂದ ತಪ್ಪಿಸಿಕೊಂಡು ಬೆಂಗಳೂರು ನಗರವನ್ನು
ಸೇರಿದ್ದರು. ಅಲ್ಲಿಂದ ಮುಂದೆ ಮೂವರೂ ಸೇರಿ ತಮ್ಮ ಕೈಚಳಕವನ್ನು
ತೋರದ ಕಾರ್ಯರಂಗವೇ ಉಳಿದಿರಲಿಲ್ಲ. ಕಣ್ಣನ್ ತಯಾರಿಸಿದ ನೋಟು
ಗಳನ್ನು ಜಾರ್ಜ್ ಕತ್ತರಿಸಿದ ಕಿಟಕಿಗಳ ಮೂಲಕ ತಳವಾರ ನಿಂಗ ಒಳ
ಪ್ರವೇಶಿಸಿ ಶ್ರೀಮಂತ ಮನೆಯ ನಿಜವಾದ ನೋಟುಗಳ ಬದಲಾಗಿ ಖೋಟಾ
ನೋಟುಗಳನ್ನಿಟ್ಟು ನಿಜವಾದ ನೋಟುಗಳನ್ನು ತೆಗೆದುಕೊಂಡು ಬರುತ್ತಿದ್ದ.
ತಮ್ಮ ಮನೆಯ ಕಿಟಕಿಗಳು ಮುರಿದದ್ದು ಮಾತ್ರ ಧನಿಕರಿಗೆ ಬೆಂಗಳೂರಿನಲ್ಲಿ
ಗೊತ್ತಾಗುತ್ತಿತ್ತು. ಆದರೆ ಏನು ಕಳುವಾಗಿದೆ ಎಂದು ಅವರಿಗೆ ಕೂಡಲೇ
ಗೊತ್ತಾಗುತ್ತಿರಲಿಲ್ಲ. ಹಲವಾರು ಶ್ರೀಮಂತರು ಮತ್ತು ಸಜ್ಜನರ ಕೈಯಿಂದ
ಖೋಟಾನೋಟುಗಳು ಚಲಾವಣೆಗೆ ಬರುತ್ತಿರುವುದು ಪೋಲಿಸರಲ್ಲಿ ಆಶ್ಚರ್ಯ
ವನ್ನು ಹುಟ್ಟಿಸಿತ್ತು. ಆದರೆ ನಿಜವಾದ ಕೇಡಿಯನ್ನು ಹಿಡಿಯಲು ಅವರು
ಕಾಯುತ್ತಿದ್ದರು. ಈ ಮೂವರೂ ಬೆಂಗಳೂರಿನಲ್ಲಿರುವುದು ಪೀರಯ್ಯ ಮತ್ತು

ಚಂಡೀದಾಸರಿಗೆ ಗೊತ್ತಿತ್ತು. ಆದರೆ ಖಚಿತವಾಗಿ ಅವರ ವಾಸಸ್ಥಾನವನ್ನು ಕಂಡುಹಿಡಿಯುವುದು ಮಾತ್ರ ಸಾಧ್ಯವಾಗಿರಲಿಲ್ಲ. ಮೇಲಾಗಿ ಈ ಮೂವರೂ ಸಾಚಾ ನೋಟುಗಳನ್ನೇ ಉಪಯೋಗಿಸುತ್ತಿದ್ದುದ್ದರಿಂದ ಅವರ ಮೇಲೆ ಯಾರಿಗೂ ಸಂಶಯವು ಬರುತ್ತಿರಲಿಲ್ಲ.

ಈ ಮೂವರೂ ಇಂಥ ಇತರ ವ್ಯಕ್ತಿಗಳಂತೆ ಅಲ್ಪ ತೃಪ್ತರಾಗಿರಲಿಲ್ಲ. ಹೇಗಾದರೂ ಮಾಡಿ ಒಂದು ಸಲ ದೊಡ್ಡ ನಿಧಿಯೊಂದಕ್ಕೆ ಕೈ ಹಾಕಿ ಮೂವರೂ ಈ ಕರಾಳ ಜೀವನದಿಂದ ಬಿಡುಗಡೆ ಹೊಂದಬೇಕೆಂದು ಬಯಸುತ್ತಿದ್ದರು. ಈ ಮೂವರ ಆಶೆಯು ಈಡೇರುವ ದಿನ ಕೂಡ ಈ ಮೂವರಿಗೂ ಹೊಳೆದಂತೆ ತೋರುತ್ತಿತ್ತು.

ಕೆಲವು ದಿನಗಳ ಹಿಂದೆ ಇವರು ಬೆಂಗಳೂರಿನ ಸುಪ್ರಸಿದ್ಧ ಹೊಟೆಲ್ ಒಂದರಲ್ಲಿ ಹಾಯಾಗಿ ಕುಳಿತಾಗ ಪಕ್ಕದ ಟೇಬಲ್ ಮೇಲೆ ಕುಳಿತು ಹರಟುತ್ತಿದ್ದ ಇಬ್ಬರ ಮಾತುಗಳು ಇವರ ಕಿವಿಗಳು ನಿಮಿರುವಂತೆ ಮಾಡಿದ್ದವು. ಆ ಸಂಭಾಷಣೆ ಹೀಗೆ ಸಾಗಿತ್ತು. 'ಮುಳ್ಳಯ್ಯನಗಿರಿ ಬೆಟ್ಟದ ಬಳಿ ಆ ಗುಹೆ ಇದೆ'.

'ಅಲ್ಲಿಯೇ ಅವನು ಹೋಗಿದ್ದ'?

'ಹೌದು. ಚಂದರಸ ಒಬ್ಬ ಜೈನ ಮಹಾರಾಜನಾಗಿದ್ದ. ತನ್ನ ಕೊನೆಯ ದಿನಗಳಲ್ಲಿ ಆ ಅರಸನು ವೈರಿಯಿಂದ ಪರಾಜಿತನಾದ. ಆದರೆ ನಂತರ ಅವನಾಗಲೀ ಅವನ ಸಂಪತ್ತಾಗಲೀ ಏನಾಯಿತೆಂದು ಯಾರಿಗೂ ಗೊತ್ತಿಲ್ಲ. ಚರಿತ್ರೆಯಲ್ಲಿ ಕೂಡ ಇದರ ಉಲ್ಲೇಖವಿಲ್ಲ. ಆದರೆ ನಮ್ಮ ಊರಿನಲ್ಲಿ ಮೊನ್ನೆ ಒಂದು ಮಹತ್ವದ ದಾಖಲೆ ಸಿಕ್ಕಿದೆ. ಚಂದರಸನು ಮುಳ್ಳಯ್ಯನಗಿರಿಯ ಬಳಿ ಇರುವ ಯಾವ ಗವಿಯಲ್ಲಿದ್ದ ಉಲ್ಲೇಖ ಅದರಲ್ಲಿದೆ'.

'ವೆರಿ ಇಂಟರೆಸ್ಟಿಂಗ್. ಆ ಉಲ್ಲೇಖವನ್ನು ತಂದಿದ್ದೀರಾ'?

'ಹೌದು ಸಾರ್. ನಾನು ಇಳಿದುಕೊಂಡ ಹೋಟೆಲ್‌ನಲ್ಲಿ ಅದು ಇದೆ. ನಾಳೆ ನಿಮಗೆ ತಂದು ತೋರಿಸುವೆ'.

'ನಾಳೆ ಬೇಡ, ಈಗಲೇ ನೋಡೋಣ ನಡೆಯಿರಿ'.

ಅಪರಿಚಿತರಿಬ್ಬರೂ ಎದ್ದು ಹೊರನಡೆದರು.

ಜಾರ್ಜ್, ಕಣ್ಣನ್ ಮತ್ತು ನಿಂಗರಿಗೆ ಸ್ವರ್ಗ ಮೂರೇ ಗೇಣಿನ ಅಂತರದಲ್ಲಿದೆ ಎಂದು ಎನ್ನಿಸಿತು. ಮೂವರೂ ಅಪರಿಚಿತರನ್ನು ಹಿಂಬಾಲಿಸಿ ಅವರು ಇಳಿದುಕೊಂಡ ಹೋಟೆಲನ್ನು ಗುರುತಿಸಿಕೊಂಡರು.

ಅದೇ ರಾತ್ರಿ ಚಂಡರಸ ಓಡಿಹೋಗಿ ತನ್ನ ನಿಧಿಯೊಡನೆ ಆಶ್ರಯ ಪಡೆದ ಗುಹೆಯ ನಕ್ಷೆ ಮತ್ತು ವಿವರಗಳು ಕಳುವಾದವು.

## ೧೭

ಚಂದರಸನನ್ನು ಕುರಿತು ಜಾರ್ಜ್, ಕಣ್ಣನ್ ಮತ್ತು ನಿಂಗರು ದಾಖಲೆಗಳನ್ನು ವಶಪಡಿಸಿಕೊಂಡು ತಮ್ಮ ಜೀವನದ ಬಹು ಮಹತ್ವವಾದ ಸಾಧನೆಯನ್ನು ಮಾಡಿನೆವೆಂದು ತಿಳಿದುಕೊಂಡಿದ್ದರು. ಆದರೆ ದೈವವು ಅವರಿಗೆ ವಿರೋಧವಾಗಿತ್ತು. ಹೋಟೆಲ್‌ನಿಂದ ಮಧ್ಯರಾತ್ರಿಯ ನಂತರ ಅಮೂಲ್ಯ ದಾಖಲೆಯನ್ನು ಅವರು ಕಳುವುಮಾಡಿ ತೆಗೆದುಕೊಂಡು ಹೊರಟಾಗ ಒಬ್ಬ ಗಸ್ತು ಪಡೆಯ ಫೋಲಿಸ್ ಬೇಹುಗಾರ ಅವರನ್ನು ಗುರುತಿಸಿಬಿಟ್ಟಿದ್ದ. ಅವರು ಹೋದ ಕಾರಿನ ನಂಬರನ್ನು ಕೂಡ ಅವನು ಗುರುತಿಸಿಕೊಂಡಿದ್ದ.

ರಾತ್ರಿ ಎರಡು ಗಂಟೆಯ ಸುಮಾರಿಗೆ ಚಂಡೀದಾಸನ ಮನೆಯ ಫೋನ ಅರಚಿಕೊಳ್ಳತೊಡಗಿತು. ಕಣ್ಣುಜ್ಜುತ್ತಾ ಚಂಡೀದಾಸನು ಫೋನನ್ನು ಕೈಗೆತ್ತಿಕೊಂಡ. ಆ ಕಡೆಯಿಂದ ಬೇಹುಗಾರ ಎಲ್ಲ ವಿವರಗಳನ್ನು ನೀಡಿದ ಕೂಡಲೆ ಚಂಡೀದಾಸನ ಮನಸ್ಸು ಜಾರ್ಜ್, ಕಣ್ಣನ್ ಮತ್ತು ನಿಂಗರ ಸುಳಿವನ್ನು ಪತ್ತೆಹಚ್ಚುವತ್ತ ಕೆಲಸ ಮಾಡತೊಡಗಿತು. ಆ ರಾತ್ರಿಯಲ್ಲಿ ಕೂಡಲೇ ಚಂಡಿದಾಸನು ಸಿದ್ಧನಾದ. ತನ್ನ ಬೇಹುಗಾರನು ನೀಡಿದ ಸುಳಿವಿನ ಮೂಲಕ ಮೊದಲು ಕಾರು ಯಾರಿಗೆ ಸೇರಿದ್ದು ಎಂದು ಚಂಡೀದಾಸನು ಪತ್ತೆ ಹಚ್ಚಬೇಕಿತ್ತು. ಜೀಸಿನಲ್ಲಿ ಆ ಕೂಡಲೇ ತನ್ನ ಆಫೀಸಿಗೆ ಬಂದ ಅವನು ಆ ಕಾರಿನ ವಿವರಗಳನ್ನು ಪಡೆದ. ನಿರೀಕ್ಷಿಸಿದ್ದಂತೆ ಅದೊಂದು ಕಳುವಾಗಿದ್ದ ಕಾರು ಆಗಿತ್ತು. ಪೋಲೀಸ್ ಮೂಲಕ ಕಾರಿನ ಎಲ್ಲಾ ವಿವರಗಳನ್ನೂ

ನೀಡಿ ಪೋಲಿಸ್ ಪೋಸ್ಟ್‌ಗಳಿಗೆ ಸಂದೇಶವನ್ನು ಕಳುಹಿಸಿದ. ಅರ್ಧ ಗಂಟೆಯ ನಂತರ ಕಾರು ಮಹಾತ್ಮಾ ಗಾಂಧಿ ರೋಡಿನ ರಸ್ತೆಯ ಅಂಚಿನಲ್ಲಿ ನಿಂತಿದ್ದ ವರದಿ ಬಂದಿತು. ಕ್ಷಣಾರ್ಧದಲ್ಲಿ ಚಂಡೀದಾಸನು ಆ ಸ್ಥಳಕ್ಕೆ ಧಾವಿಸಿದ. ಕಾರಿನಲ್ಲಿ ವ್ಯಕ್ತಿಗಳು ಯಾರೂ ಇರಲಿಲ್ಲ. ತನ್ನ ಪಡೆಯವರಿಗೆ ಕಾರಿನಿಂದ ದೂರವಿರಲು ಸೂಚನೆ ನೀಡಿದ. ಸುಮಾರು ಒಂದು ಗಂಟೆಯ ನಂತರ ಅಮಲಿನಲ್ಲಿದ್ದ ಮೂವರು ವ್ಯಕ್ತಿಗಳು ತೂರಾಡುತ್ತಾ ಬಂದು ಕಾರನ್ನು ಪ್ರವೇಶಿಸಿದರು.

೧೮

ಕಾನೂನಿಗೆ ಬೇಕಾಗಿದ್ದ ಮೂವರನ್ನು ಕಂಡುಹಿಡಿದ ಆನಂದವು ಒಂದು ಕಡೆ ಚಂಡೀದಾಸನಿಗೆ ಇದ್ದರೆ ಇನ್ನೊಂದೆಡೆ ಅವರನ್ನು ಈಗಲೇ ಬಂಧಿಸಬೇಕೆ ಎನ್ನುವ ಪ್ರಶ್ನೆಯು ಎದುರಾಯಿತು. ಬಹಳ ಹೊತ್ತು ಯೋಚಿಸಿದ ನಂತರ ಅವರನ್ನು ಈಗಲೇ ಬಂಧಿಸುವುದು ಉಚಿತವಲ್ಲವೆಂದು ಆತನಿಗೆ ಅನ್ನಿಸಿತು. ಏಕೆಂದರೆ ಅವರು ಕಾರನ್ನು ಕದ್ದಿರುವುದರಿಂದ ಅವರಿಗೆ ಬೇರೆ ಯೋಜನೆಗಳು ಇರಬಹುದೆಂದು ಕೊಂಡುಕೊಂಡ ಚಂಡೀದಾಸ. ಹೀಗಾಗಿ ಬೇಹುಗಾರನೊಬ್ಬನನ್ನು ಆ ಮೂವರ ವಾಸ ಸ್ಥಳವನ್ನು ಕಾಯಲು ನೇಮಿಸಿ ಆತನಿಗೆ ಉಚಿತವಾದ ಸಲಹೆ ಸೂಚನೆಗಳನ್ನು ನೀಡಿದ. ಯಾವ ಸಮಯದಲ್ಲಾದರೂ ಆ ಮೂವರೂ ಹೊರಬಿದ್ದೊಡನೆ ಅದನ್ನು ತನಗೆ ತಿಳಿಸಬೇಕೆಂದು ಚಂಡೀದಾಸನು ತನ್ನ ಬೇಹುಗಾರರಿಗೆ ಆಜ್ಞೆಯನ್ನು ನೀಡಿದನು.

ಇತ್ತ —

ಗಾಮಾನ ಗುಹೆಯಲ್ಲಿ ಬಹು ದೂರದ ಪ್ರಯಾಣದ ಸಿದ್ಧತೆಗಳನ್ನು ಸರಸ್ವತಿ ಮತ್ತು ಗಾಮಾರು ನಡೆಸಿದ್ದರು. ಪ್ರಶಾಂತ ಮತ್ತು ನರಸಿಂಹ ಮೂರ್ತಿಗಳಿಗೆ ಈ ಸಿದ್ಧತೆ ಏಕೆ ಎಂದು ಮಾತ್ರ ಗೊತ್ತಿರಲಿಲ್ಲ. ಕೊನೆಗೆ ಕುತೂಹಲವನ್ನು ತಾಳಲಾರದೆ ಗುಂಡಪ್ಪನು 'ನಾಳೆ ಎಲ್ಲಿಗಾದರೂ ಹೋಗುವುದಿದೆಯೇ' ? ಎಂದು ಗಾಮಾನನ್ನು ಪ್ರಶ್ನಿಸಿದ. ಗಾಮಾನು ಚುಟುಕಾಗಿ

' ಹೌದು ' ಎಂದು ಉತ್ತರಿಸಿದ. ' ಎಲ್ಲಿಗೆ ಎಂದು ಕೇಳಬಹುದೆ ' ? ಎಂದರು ನರಸಿಂಹಮೂರ್ತಿಗಳು.

' ಬಾಬಾಬುಡನ್ ಬೆಟ್ಟದ ಸುತ್ತಮುತ್ತ ಅನೇಕ ಅನೇಕ ಗುಹೆಗಳಿವೆ ಯಂತೆ. ಜೀವನದ ಪ್ರವಾಹದಿಂದ ದೂರವಾಗಿ ಅನೇಕ ಸಿದ್ಧಪುರುಷರು ತಮತಮಗೆ ತಿಳಿದ ಧ್ಯಾನ ಮಾರ್ಗಗಳನ್ನು ಈ ಗುಹೆಗಳಲ್ಲಿ ಕುಳಿತು ಅನುಸರಿ ಸುತ್ತಿದ್ದಾರೆ ಎಂದು ಯೋಗಿ ನರೇಂದ್ರರು ಹೇಳಿದ್ದಾರೆ. ಆ ಗುಹೆಗಳನ್ನು ನಿಮ್ಮೆಲ್ಲರನ್ನೂ ಕರೆದುಕೊಂಡು ಹೋಗಿ ಸಂದರ್ಶಿಸಬೇಕೆಂದು ನನ್ನ ಬಯಕೆ' ಎಂದು ಗಾಮಾ ತನ್ನ ಪ್ರಯಾಣದ ಉದ್ದೇಶಕ್ಕೆ ವಿವರಣೆಯನ್ನು ನೀಡಿದ.

ಆ ರಾತ್ರಿ ಕಂಗಲು ಪ್ರಶಾಂತ, ಗುಂಡಪ್ಪ ಮತ್ತು ರೀಟಾರಿಗೆ ಒಂದು ಕೊಠಡಿಯನ್ನು ಒದಗಿಸಲಾಗಿತ್ತು. ರಾತ್ರಿ ಆ ಮೂವರೂ ಸಮಾಲೋಚನೆ ಯಲ್ಲಿ ತೊಡಗಿದರು. ಅವರ ಮುಂದೆ ಇದ್ದ ಬಹು ಮುಖ್ಯವಾದ ಪ್ರಶ್ನೆ ಎಂದರೆ ಈ ಗುಹೆಯಿಂದ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸಬೇಕೆ ಎಂಬುದು. ಹಾಗೆ ಪ್ರಯತ್ನಿಸಬೇಕು ಎಂಬುದು ಗುಂಡಪ್ಪನ ಅಭಿಮತ ವಾಗಿತ್ತು. ' ಆದರೆ, ಗಾಮಾ ಮತ್ತು ಆವನ ಶಕ್ತಿಯ ಎದುರು ನಮ್ಮ ಆಟ ನಡೆಯುವುದಿಲ್ಲ ಗುಂಡಪ್ಪ ' ಎಂದು ರೀಟಾ ಜ್ಞಾಪಿಸಿದಳು.

' ರಾತ್ರಿಯ ಹೊತ್ತು ಆತನನ್ನು ಬಂಧಿಸಿ ನಾವು ಓಡಿಹೋಗಬಹುದು' ಎಂದ ಗುಂಡಪ್ಪ.

' ನಾವು ಆತನನ್ನು ಬಂಧಿಸಿದರೂ ಆತನು ಮಾಯವಾಗಿಬಿಡುತ್ತಾನೆ ಆಗ ನಾವು ಬಂಧಿಸಿದ ಹಗ್ಗ ಮಾತ್ರ ಉಳಿದಿರುತ್ತದೆ ' ಎಂದ ಪ್ರಶಾಂತ.

ಈಗ ಗುಂಡಪ್ಪ ನಿರುತ್ತರನಾದ.

' ಗಾಮಾನನ್ನು ಬಂಧಿಸಲು ಸಾಧ್ಯವಾಗದಿದ್ದರೆ ಯಾರನ್ನು ಬಂಧಿಸ ಬರೆ ಆವನು ನಮಗೆ ಅಪಾಯಕಾರಿಯಾಗುವುದು ತಪ್ಪಬಹುದು ಎಂಬುದನ್ನು ಯೋಚಿಸಬೇಕು ' ಎಂದಳು ರೀಟಾ.

'ಉತ್ತರ ಸ್ಪಷ್ಟವಾಗಿಯೇ ಇದೆ. ಸರಸ್ವತಿ ಮಾತ್ರ ನಮ್ಮನ್ನು ಗಾಮಾ ನಿಂದ ಕಾಪಾಡಬಲ್ಲಳು ' ಎಂದ ಪ್ರಶಾಂತ.

' ಈ ವಿಷಯ ನನಗೆ ಹೊಳೆದೇ ಇರಲಿಲ್ಲ ' ಎಂದ ಗುಂಡಪ್ಪ.

'ಏನೇ ಆದರೂ ನಾವು ಅವನೊಡನೆ ಹೊರಡಲೇಬೇಕು' ಎಂದು ತನ್ನ ನಿರ್ಧಾರವನ್ನು ಪ್ರಶಾಂತ ತಿಳಿಸಿದ.

'ಕೈದಿಗಳಂತೆ ನಾವು ಹೋಗುತ್ತಿರಬಹುದು. ಆದರೆ ಹಲವಾರು ವಿಷಯಗಳು ತಿಳಿಯುವ ಸುಯೋಗ ತಾನೇ ತಾನಾಗಿ ನಮಗೆ ಒದಗಿಬಂದಿದೆ. ಗಾವಾನ ನಿಜವಾದ ಅಸ್ತಿತ್ವವನ್ನು ತಿಳಿದುಕೊಂಡು ಭೂಮುಂಗಲದ ನಮ್ಮ ಕಲ್ಪನೆಯೇ ಬದಲಾಗಿದೆ. ಇನ್ನು ಬೆಟ್ಟದಲ್ಲಿ ಅವನೊಡನೆ ನಾವು ಪಡೆಯುವ ಅನುಭವಗಳು ಭಾರತೀಯ ಜೀವನದ ನಮ್ಮ ಕಲ್ಪನೆಗಳನ್ನೇ ಬದಲಿಸಿಬಿಡ ಬಹುದು. ಇದೊಂದು ಅಪೂರ್ವವಾದ ಸುಸಂಧಿ' ಎಂದಳು ರೀಟಾ.

'ಇದಲ್ಲದೇ ಶೃಂಗೇರಿಗೆ ಗಾವಾ ಹೇಳುತ್ತಿರುವ ಪ್ರದೇಶವು ಸಮೀಪವಾಗಿದೆ. ಶೃಂಗೇರಿಯು ಹಲವಾರು ಸಿದ್ಧಪುರುಷರಿಗೆ ಪ್ರಸಿದ್ಧವಾದ ಸ್ಥಳ. ಹೀಗಾಗಿ ಗಾವಾ ಹೇಳುತ್ತಿರುವಂತೆ ಬುಡನ್‌ಗಿರಿಯ ಬೆಟ್ಟದಲ್ಲಿ ಸಿದ್ಧರೂ, ಸನ್ಯಾಸಿಗಳೂ ಇರಬಹುದು' ಎಂದ ಪ್ರಶಾಂತ.

'ಅವರೆಲ್ಲಾ ಅಲ್ಲಿ ಇರಲಿ ಬಿಡಲಿ ನಾಳೆಯಿಂದ ನನಗೆ ಪುಕ್ಕಟೆಯಾದ ಪ್ರವಾಸ ಲಭ್ಯವಾಗಿದೆ ಎಂಬುದು ನಿಜ'? ಎಂದು ಗುಂಡಪ್ಪ ಹೊಸ್ತದಾಗಿ ಆಕಳಿಸಿದ. ಇತರರಿಗೂ ಆತನ ಆಕಳಿಕೆ ನಿದ್ರೆಯ ಸೂಚನೆಯಾಗಿತ್ತು.

ಶಾಂತಲಾ, ಗುರು ಮತ್ತು ವೀರೇಂದ್ರರಿಗೆ ಆ ರಾತ್ರಿ ಸಂಭವ ರಾತ್ರಿಯಾಗಿರಲಿಲ್ಲ. ಶಾಂತಲಾ ಗಾವಾನ ಸುಳಿವನ್ನು ಸ್ವಲ್ಪದರಲ್ಲಿ ಕಳೆದುಕೊಂಡಿದ್ದುದು ಅವರಲ್ಲಿ ಚಿಂತೆಯನ್ನು ಹುಟ್ಟಿಸಿತ್ತು. ಕೈಗೆ ಒಂದ ತುತ್ತು ಬಾಯಿಗೆ ಬರಲಿಲ್ಲ ಎಂಬಂತಾಗಿತ್ತು ಅವರ ಸ್ಥಿತಿ. ಆದರೆ ಶಾಂತಲಾ ಗಾವಾನನ್ನು ಕಳೆದುಕೊಂಡ ತಾಣದ ಸಮೀಪದಲ್ಲಿಯೇ ಆತ ಇರಬೇಕೆಂಬ ಸಮಾಧಾನ ಮೂವರಿಗೂ ಇತ್ತು.

'ಈ ಬೆಳಿಗ್ಗೆ ನೀನು ನೋಡಿದ್ದ ಹಳೆಯ ದಾಖಲೆಗಳು ನಿಜವಾದವುಗಳು ಎಂದು ಅನ್ನಿಸಿತ್ತೆ'? ಎಂದು ಶಾಂತಲಾ ವೀರೇಂದ್ರನನ್ನು ಕೇಳಿದಳು.

'ಆ ಪಳೆಯುಳಿಕೆಗಳು ನಿಜವೋ ಅಲ್ಲವೋ ಎನ್ನುವುದಕ್ಕಿಂತ ಡಾ|| ಜನಾರ್ಧನರ ಮನೆಯಲ್ಲಿ ನಾನು ಕಂಡ ವ್ಯಕ್ತಿಯೊಂದು ಈ ಬೆಳಿಗ್ಗೆ ಹೋಟೆಲ್‌ನಲ್ಲಿ ಇತ್ತು ಎಂಬುದು ನನಗೆ ಮಹತ್ವವಾದ್ದಾಗಿ ತೋರುತ್ತಿದೆ' ಎಂದ ವೀರೇಂದ್ರ.

' ಹಾ ? ಯಾರು ಆ ವ್ಯಕ್ತಿ ? ಆತನಿಗೂ ಪಳೆಯುಳಿಕೆಗಳನ್ನು ಪ್ರದರ್ಶಿಸಿದವನಿಗೂ ಏನು ಸಂಬಂಧ ' ? ಎಂದು ಶಾಂತಲಾ ಕುತೂಹಲ ದಿಂದ ಕೇಳಿದಳು.

' ಅದೂ ನನಗೆ ಗೊತ್ತಿಲ್ಲ. ಆದರೆ ಜನಾರ್ಧನರ ಮನೆಯಲ್ಲಿ ಕಂಡ ಆ ವ್ಯಕ್ತಿ ಈ ದಿನ ಸುಳ್ಳು ಪಳೆಯುಳಿಕೆಗಳನ್ನು ಪ್ರದರ್ಶಿಸುವುದರಲ್ಲಿ ಪಾಲು ಗೊಂಡಿರುವುದನ್ನು ನೋಡಿದರೆ ಅವರೂ ಗಾಮಾನ ಸುಳಿವನ್ನು ಪತ್ತೆಹಚ್ಚು ವಲ್ಲಿ ಪ್ರಯತ್ನಿಸುತ್ತಿದ್ದಾರೆ ಎನ್ನಿಸುತ್ತದೆ '. ವೀರೇಂದ್ರನ ಈ ಮಾತು ಬೇಹುಗಾರಿಕೆಯ ಬುದ್ಧಿಯ ತರ್ಕದಿಂದ ಬಂದದ್ದು ಎಂದು ಶಾಂತಲಾ ಮತ್ತು ಗುರುವಿಗೆ ಅನ್ನಿಸಿದರೂ ಕೆಲಕಾಲದ ಮೌನದ ನಂತರ ಅವರಿಬ್ಬರೂ ವೀರೇಂದ್ರನ ಮಾತನ್ನು ಒಪ್ಪಿಕೊಂಡರು.

' ಹಾಗಾದರೆ ಹೋಟೆಲ್‌ನಲ್ಲಿಯ ಅವನನ್ನು ಈ ಕೂಡಲೇ ಹೋಗಿ ಪ್ರಶ್ನಿಸುವುದು ಒಳ್ಳೆಯದು ' ಎಂದು ಗುರುವಪ್ಪನ್‌ರು ಸೂಚಿಸಿದರು.

ಹುಡುಕುವ ಮತ್ತು ಪ್ರಶ್ನಿಸುವ ಕ್ರಿಯೆಯಲ್ಲಿ ಪಳಗಿದ್ದ ವೀರೇಂದ್ರ ಈ ಮಾತಿಗೆ ಕೂಡಲೇ ಒಪ್ಪಿಗೆ ಸೂಚಿಸಿದ. ಮೂವರೂ ಆ ಕರಾಳ ರಾತ್ರಿಯಲ್ಲಿ ಪ್ರಶಾಂತ ಇಳಿದುಕೊಂಡ ಹೋಟೆಲ್‌ನತ್ತ ಕಾರಿನಲ್ಲಿ ಧಾವಿಸಿದರು.

ಹೋಟೆಲ್‌ನ ರಿಸೆಪ್ಷನ್ ರೂಮಿನಲ್ಲಿ ಮುದಿ ವಯಸ್ಸಿನ ವ್ಯಕ್ತಿಯೊಂದು ತೂಕಡಿಸುತ್ತಿತ್ತು. ಕಾರಿನಿಂದ ಇಳಿದು ಬಂದ ಈ ಮೂವರನ್ನು ಕಂಡು ಆತನು ಇವರಿಗೆ ರೂಮು ಬೇಕಾಗಿವೆ ಎಂದು ಸಹಜವಾಗಿ ಭಾವಿಸಿದ. ಆದರೆ ಬೆಳಿಗ್ಗೆ ಪಳೆಯುಳಿಕೆಗಳ ಪ್ರದರ್ಶನ ನಡೆದ ರೂಮನ್ನು ವೀರೇಂದ್ರ ವಿಚಾರಿಸಿ ದಾಗ ಆ ಮುದುಕನಿಗೆ ಕೊಂಚ ನಿರಾಶೆಯೇ ಆಯಿತು. ಆ ರೂಮಿನಲ್ಲಿ ಈಗ ಯಾರೂ ಇಲ್ಲವೆಂದೂ, ಬೆಳಿಗ್ಗೆ ಹೋದವನು ಇನ್ನೂ ಬಂದಿಲ್ಲ ವೆಂದೂ ಮುದುಕ ತಿಳಿಸಿದ. ಮುಂದೆ ಏನು ಮಾಡಬೇಕೆಂಬುದನ್ನು ಆ ಮೂವರೂ ಕಣ್ಸನ್ನೆಯಲ್ಲಿ ನಿರ್ಧರಿಸಿಕೊಂಡರು. ಗುರು ಮತ್ತು ಶಾಂತಲಾ ಹೋಟೆಲ್‌ನಿಂದ ಹೊರ ನಡೆದರು. ವೀರೇಂದ್ರ ಮಾತ್ರ ಹೋಟೆಲ್‌ನ ಮೆಟ್ಟಿಲುಗಳನ್ನೇರಿ ಮಹಡಿಯಲ್ಲಿದ್ದ ಪ್ರಶಾಂತನ ರೂಮಿನ ಎದುರು ಒಂದು ನಿಂತ. ಬೀಗಗಳನ್ನು ಲೀಲಾಜಾಲವಾಗಿ ಒಡೆಯಬಲ್ಲವನಾಗಿದ್ದ ವೀರೇಂದ್ರನು ಸಹಜವಾಗಿ ಆ ರೂಮನ್ನು ಪ್ರವೇಶಿಸಿದ. ಹುಡುಕುವುದರಲ್ಲಿ ಪರಿಣತೆ

ಯನ್ನು ಪಡೆದಿದ್ದ ಆತನು ಆ ರೂಪನ್ನು ಅಂಗುಲ ಅಂಗುಲವಾಗಿ ಶೋಧಿಸಿದ. ಅನ್ಯಲೋಕ ಜೀವಿಗಳನ್ನು ಕುರಿತು ರೀಟಾ ಸಿದ್ಧಪಡಿಸಿದ ಫೈಲನ್ನು ಆತನೇ ಕಂಡುಹಿಡಿದ. ಆ ಸೊಂದನ್ನು ಬಿಟ್ಟು ಉಳಿದ ಯಾವ ವಸ್ತುವೂ ಆತನ ಆಸ್ಥೆಯನ್ನು ಕೆರಳಿಸಲಿಲ್ಲ.

ಹೋಟೆಲ್‌ನಿಂದ ಹೊರಬಂದೊಡನೆ ಶಾಂತಲಾಳಿಗೆ ಆತನು ಆ ಫೈಲನ್ನು ನೀಡಿದ. ಗುರು ಮತ್ತು ಶಾಂತಲಾ ಆ ಫೈಲನ್ನು ಸೂಕ್ಷ್ಮವಾಗಿ ಅವಲೋಕಿಸಿದರು. ಅನ್ಯಲೋಕ ಜೀವಿಗಳ ಬಗೆಗೆ ಅಧ್ಯಯನ ನಡೆಸಿದ ಈ ಮೂವರಿಗೂ ಗಾಮಾನ ಸುಳಿವು ಗೊತ್ತಾಗಿದೆ ಎಂದು ಈಗ ಖಚಿತವಾಯಿತು. ಅವರು ಈಗ ಮಾಯವಾಗಿರುವುದಕ್ಕೂ ಗಾಮಾನೇ ಕಾರಣ ಎಂದು ಅವರು ನಿರ್ಧರಿಸಿದರು.

ಮನೆಗೆ ಮರಳಿದೊಡನೆ ಮೂವರೂ ಒಂದು ನಿರ್ಧಾರಕ್ಕೆ ಬಂದರು. ಮರುದಿನ ಬೆಳಿಗ್ಗೆ ಐದು ಗಂಟೆಗೆ ಅವರ ಕಾರ್ಯ ಪ್ರಾರಂಭವಾಗುವುದಿತ್ತು.

## ೧೭

ಮರುದಿನ ಬೆಳಿಗ್ಗೆ ನಾಲ್ಕು ಗಂಟೆಗೆ ಬೆಂಗಳೂರು ನಗರವು ಇಬ್ಬನಿಯಿಂದ ಆವೃತವಾಗಿತ್ತು. ಇನ್ನೂ ನಗರದ ಚಟುವಟಿಕೆಗಳು ಭರದಿಂದ ಸಾಗಿರಲಿಲ್ಲ. ಆದರೆ ಇಷ್ಟರಲ್ಲಿ ಗುರು ಶಾಂತಲ ಮತ್ತು ವೀರೇಂದ್ರರು ಕಾರಿನಲ್ಲಿ ನಗರದ ಹೊರವಲಯದ ಬೆಟ್ಟದ ತುದಿಯಲ್ಲಿ ಉಪಸ್ಥಿತರಿದ್ದರು ಇದೇ ಸ್ಥಳದಿಂದ ರೀಟಾಳು ಗಾಮಾ ಇರುವ ಸ್ಥಳವನ್ನು ಗುರುತಿಸಿದ್ದಳು. ಈಗ ಸುತ್ತಲಿನ ನಾಲ್ಕು ಮೈಲುಗಳ ನೋಟವು ಮೂವರಿಗೂ ಬಹು ಸುಂದರವಾಗಿ ಕಾಣುತ್ತಿತ್ತು. ಆ ದಟ್ಟವಾದ ಇಬ್ಬನಿಯಲ್ಲಿ ಕಾರುಗಳು ತಮ್ಮ ಲೈಟುಗಳನ್ನು ಹೊತ್ತಿಸದೆ ಹೋಗುವಂತಿರಲಿಲ್ಲ. ಹೀಗಾಗಿ ರಸ್ತೆಯಿಂದ ದೂರದಲ್ಲಿ ಎಲ್ಲಿಯಾದರು ಕಾರಿನ ಲೈಟಿನ ಬೆಳಕು ಕಂಡೊಡನೆ ಆ ಸ್ಥಳಕ್ಕೆ ಧಾವಿಸುವುದೆಂದು ಅವರು ನಿರ್ಧರಿಸಿಕೊಂಡು ಕುಳಿತಿದ್ದರು. ಅವರ ನಿರೀಕ್ಷೆ ಸುಳ್ಳಾಗಲಿಲ್ಲ.

ಸುಮಾರು ಐದು ಗಂಟೆಯ ಹೊತ್ತಿಗೆ ಕಲ್ಲಿನ ಗುಡ್ಡದ ಕೆಳಭಾಗದಿಂದ

ಎರಡು ಕಾರುಗಳು ರಸ್ತೆಯಿಂದ ಬಹುದೂರ ಚಲಿಸುತ್ತಿರುವುದು ಕಂಡು ಬಂದಿತು. ವೀರೇಂದ್ರ ಕೂಡಲೇ ಕಾರನ್ನು ಆ ಕಡೆಗೆ ನಡೆಯಿಸಿ ಹೊರಟ. ಇವನು ಆ ತಾಣವನ್ನು ಸೇರುವ ಹೊತ್ತಿಗೆ ಕಾರುಗಳು ಒಂದು ಗುಡಿಸಿಲಿನಿಂದ ಸ್ವಲ್ಪ ದೂರದಲ್ಲಿ ನಿಂತಿರುವುದು ಕಂಡುಬಂದಿತು. ವೀರೇಂದ್ರನು ತನ್ನ ಕಾರನ್ನು ಸ್ವಲ್ಪ ಎತ್ತರವಾದ ಪ್ರದೇಶದಲ್ಲಿ ಬೇರೆಯವರಿಗೆ ಕಾಣದಂತೆ ನಿಲ್ಲಿಸಿದ. ಮೊದಲು ಆ ಇಬ್ಬನಿಯಲ್ಲಿ ಮೊಬ್ಬು ಮೊಬ್ಬಾದ ಆಕೃತಿಗಳು ಕಾರಿನಲ್ಲಿ ಸಾಮಾನುಗಳನ್ನು ಇಡುತ್ತಿರುವುದು ಕಂಡುಬಂದಿತು. ನಂತರ ಗುರುವತ್ಸನ್ ಗಾಮಾನನ್ನು ಸ್ಪಷ್ಟವಾಗಿ ಗುರುತಿಸಿದರು. ವೀರೇಂದ್ರನು ಗುಂಡಪ್ಪ ಮತ್ತು ಪ್ರಶಾಂತರನ್ನು ಗುರುತಿಸಿದ. ನರಸಿಂಹಮೂರ್ತಿಗಳನ್ನು ಅವರಾರೂ ನೋಡಿರಲೇ ಇಲ್ಲವಾದ್ದರಿಂದ ಅವರು ಯಾರಿರಬಹುದೆಂದು ಅವರಿಗೆ ತಕ್ಷಣ ತಿಳಿಯಲಿಲ್ಲ. ಆದರೆ ರೀಟಾ ಮತ್ತು ಸರಸ್ವತಿಯಲ್ಲಿ ಯಾರೋ ಗಾಮಾನೊಡನೆ ಇರುವ ಹೆಣ್ಣಾಗಿರಬಹುದು ಎಂಬುದು ಮಾತ್ರ ವೀರೇಂದ್ರನಿಗೆ ಗೊತ್ತಾಯಿತು. ಏಕೆಂದರೆ ಹೋಟೆಲ್‌ನಲ್ಲಿ ಅವನು ಈ ಮೊದಲು ರೀಟಾಳನ್ನು ನೋಡಿದ್ದ.

ಕೆಲ ನಿಮಿಷದ ನಂತರ ಗಾಮಾ ಮತ್ತು ಪ್ರಶಾಂತರ ಕಾರುಗಳು ಸಾವಕಾಶವಾಗಿ ರಸ್ತೆಯ ಕಡೆ ಸಾಗತೊಡಗಿದವು. ವೀರೇಂದ್ರನು ತನ್ನ ಕಾರಿನ ಲೈಟುಗಳನ್ನು ಹೊತ್ತಿಸದೇ ನಿಧಾನವಾಗಿ ಆ ಎರಡೂ ಕಾರುಗಳನ್ನು ಬಹಳ ದೂರದಿಂದ ಹಿಂಬಾಲಿಸತೊಡಗಿದ.

ಈ ಮೂರು ಕಾರುಗಳು ಸುಮಾರು ಇಪ್ಪತ್ತು ಮೈಲು ಕ್ರಮಿಸುವ ಹೊತ್ತಿಗೆ ಬೆಂಗಳೂರಿನ ಮಹಾತ್ಮಾ ಗಾಂಧಿ ರಸ್ತೆಯಲ್ಲಿ ಚಟುವಟಿಕೆ ಪ್ರಾರಂಭವಾಯಿತು. ಜಾರ್ಜ್. ಕನ್ನನ್ ಮತ್ತು ಸಿಂಗ ಪ್ರಯಾಣಕ್ಕೆ ಹೊರಡುವ ಸಿದ್ಧತೆಯಲ್ಲಿ ಬಂದು ತಮ್ಮ ಕಾರನ್ನು ಪ್ರವೇಶಿಸಿದರು. ಕೂಡಲೇ ಬೇಹುಗಾರನಿಂದ ಚಂಡೀದಾಸನಿಗೆ ಸುದ್ದಿ ತಲುಪಿತು. ಇಂಥ ಸುದ್ದಿಯ ನಿರೀಕ್ಷಣೆಯಲ್ಲಿ ಕುಳಿತಿದ್ದ ಚಂಡೀದಾಸನು ಕೂಡಲೇ ಸಿದ್ಧನಾಗಿದ್ದ ತನ್ನ ಜೀಪಿನಲ್ಲಿ ಹತ್ತಿ ಕುಳಿತಿದ್ದ ಒಬ್ಬನೇ ಹೊರಟನು. ಬೇಹುಗಾರನು ಕನ್ನನರ ಕಾರು ಯಾವ ರಸ್ತೆಯಲ್ಲಿ ಹೋಗುತ್ತಿದೆ ಎಂಬುದನ್ನು ವೈರ್‌ಲೆಸ್ ಮೂಲಕ ತನ್ನ ಹಿಂಬಾಲಿಸುತ್ತಿದ್ದ ಕಾರಿನಲ್ಲಿ ಕುಳಿತು ಚಂಡೀದಾಸನಿಗೆ ತಿಳಿಸುತ್ತಿದ್ದನು. ಹೀಗಾಗಿ ಕೊನೆಗೆ ಊರಿನ ಹೊರವಲಯದಲ್ಲಿ ಚಂಡೀದಾಸನು ಕನ್ನನರ

ಕಾರನ್ನು ಗುರುತಿಸಿದ. ಹಿಂಬಾಲಿಸುತ್ತಿದ್ದ ತನ್ನ ಕಡೆಯವರಿಗೆ ಮರಳಲ ಸೂಚನೆಯನ್ನು ನೀಡಿದ. ಆ ಪಡೆಯಲ್ಲಿದ್ದ ತರುಣ ಪೋಲೀಸ್ ಪೇದೆಯಾ ಶಿವಾಜಿಯನ್ನು ಮಾತ್ರ ಚಂಡೀದಾಸನು ತನ್ನೊಡನೆ ಕರೆದುಕೊಂಡ ಹೊರಟ. ತನ್ನ ಮುಂದಿನ ಕಾರು ಹಾಸನದ ರಸ್ತೆಯಲ್ಲಿ ಓಡುತ್ತಿರುವುದನ್ನು ಕಂಡು ಚಂಡೀದಾಸನಿಗೆ ಆಶ್ಚರ್ಯವೇ ಆಯಿತು. ಕಣ್ಣಾರ್ನ ಖೋಟಾ ನೋಟುಗಳನ್ನು ಚಲಾವಣೆಗೆ ತರುವ ಉದ್ದೇಶದಿಂದ ಅವರಿಲ್ಲಿ ಹಾಸನಕ್ಕೆ ಹೊರಟಿರಬಹುದೆಂದು ಯೋಚಿಸಿ ಚಂಡೀದಾಸನು ಅವರನ್ನು ಹಿಂಬಾಲಿಸಿದ

೨೦

ನಾಯಕ ಸಂಗಡಿಗರು ಆ ರಾತ್ರಿ ಹಾಸನದಲ್ಲಿಯೇ ಕಳೆಯಬೇಕೆಂದು ನಿರ್ಧರಿಸಿಕೊಂಡರು. ಗಾಮಾ ಮತ್ತು ತಂಡದವರು ಸರ್ಕಾರದ ಪ್ರವಾಸಿ ಮಂದಿರದಲ್ಲಿ ತಂಗಿದರು. ಚಂಡೀದಾಸನು ಪೋಲೀಸ್ ಅತಿಥಿ ಗೃಹದಲ್ಲಿ ಉಳಿದನು. ವೀರಪ್ಪ ಮತ್ತು ಸಂಗಡಿಗರು ಒಂದು ಹೋಟಲ್‌ನಲ್ಲಿ ಉಳಿದರೆ, ಕರೀಮರು ಇನ್ನೊಂದು ಹೋಟೇಲಿನಲ್ಲಿ ಬೀಡಾರ ಮಾಡಿದ್ದರು. ಜಾರ್ಜನಿಗೆ ರಾತ್ರಿಯ ಹೊತ್ತು ಸುಮ್ಮನಿರಲು ಆಗುತ್ತಿರಲಿಲ್ಲ. ಆತನ ಕಸಬು ರಾತ್ರಿಯ ವೇಳೆಯಲ್ಲಿಯೇ ಪ್ರಾರಂಭವಾಗುತ್ತಿದ್ದುದರಿಂದ ಆತನು ರಾತ್ರಿಯ ವೇಳೆ ಕೊನೆಯ ಪಕ್ಷ ಒಂದು ಸುತ್ತು ಓಡಾಡಿಕೊಂಡು ಬರಬೇಕಾಗಿತ್ತು. ಹಾಸನದಲ್ಲಿಯೂ ಜಾರ್ಜನು ಹಾಯಾಗಿ ಆಡ್ಡಾಡಿಕೊಂಡು ಬರಲು ಬೀದಿಗೆ ಇಳಿದನು. ಆ ಕಡೆ ಈ ಕಡೆ ಸುತ್ತಾಡಿಕೊಂಡು ಕೊನೆಗೆ ಪೋಲೀಸ್ ಅತಿಥಿ ಗೃಹದ ಎದುರು ಬಂದನು. ಅಲ್ಲಿ ನಿಂತಿದ್ದ ಜೀಪು ಮತ್ತು ಅದರ ನಂಬರುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ. ಅದು ಬೆಂಗಳೂರಿನ ಪೋಲೀಸ ಜೀಪೆಂದು ಅವನಿಗೆ ಖಚಿತವಾಯಿತು. ಹಾಗೆಯೇ ಅತಿಥಿ ಗೃಹದ ವರಾಂಡದ ಒಳಗೆ ಸ್ವಲ್ಪ ಇಣಿಕಿ ನೋಡಿದನು. ಆಗ ಆಗ ಊಟಮಾಡಿ ಸಿಗರೇಟು ಸೇದುತ್ತಾ ನಿಂತಿದ್ದ ಚಂಡೀದಾಸನು ಜಾರ್ಜನ ಕಣ್ಣಿಗೆ ಬಿದ್ದನು. ಇಂಥ ಕೈದಿಗಳಿಗೆ ಸಿಂಹಸ್ವಪ್ನವಾಗಿದ್ದ ಚಂಡೀದಾಸನನ್ನು ಅಲ್ಲಿ ಕಂಡೊಡನೆ

ಜಾರ್ಜ್‌ನು ತನ್ನ ಕಾಲಿಗೆ ಬುದ್ಧಿ ಹೇಳಿದನು. ವೇಗವಾಗಿ ಬಂದು ತನ್ನ ಸಂಗಾತಿಗಳಿಗೆ ಈ ವಿಷಯವನ್ನು ಅರುಹಿದನು. ಮೂವರಿಗೂ ಆಶ್ಚರ್ಯವಾಯಿತು. ಬೆಂಗಳೂರಿನಲ್ಲಿ ಇರಬೇಕಾಗಿದ್ದ ಚಂಡೀದಾಸನು ಹಾಸನದಲ್ಲಿ ತಮ್ಮನ್ನು ಬಂಧಿಸಲು ಬಂದಿರಬಹುದೆ? ಎಂದು ಭಯವಾಗತೊಡಗಿತು. ಊಟವಾದ ನಂತರ ಕುಡಿದಿದ್ದ ವಿಸ್ಕಿ ಅಮಲು ಈಗ ಇಳಿದು ಹೋಗಿತ್ತು. ಕಣ್ಣನ್ ಮೌನವನ್ನು ಮುರಿದು ಮಾತನಾಡಿದ, 'ಚಂಡೀದಾಸನ ಜೀಪನ್ನು ನಾವು ಈ ರಾತ್ರಿ ಅಪಹರಿಸಿ ನಾಳೆ ಆತನು ನಮ್ಮನ್ನು ಬೆನ್ನಟ್ಟದಂತೆ ನೋಡಿಕೊಳ್ಳಬೇಕು'.

'ಜೀಪನ್ನು ಮುಗಿಸುವ ಬದಲು ಚಂಡೀದಾಸನನ್ನೇ ಮುಗಿಸಬೇಕು' ಎಂದ ನಿಂಗ. ಈ ಮಾತಿಗೆ ಉಳಿದ ಇಬ್ಬರೂ ಸಮ್ಮತಿಸಲಿಲ್ಲ. ಜಾರ್ಜ್‌ನು ತನ್ನ ಕೈಚಳಕವನ್ನು ಉಪಯೋಗಿಸಿ ಜೀಪು ಕೆಲಸಮಯ ಓಡಿದ ನಂತರ ಜೀಪಿನ ಬ್ರೇಕ್‌ಗಳು ವಿಫಲವಾಗುನಂತೆ ಮಾಡಬೇಕೆಂದು ನಿರ್ಧರಿಸಲಾಯಿತು. ಮಧ್ಯರಾತ್ರಿ ಕಳೆದ ನಂತರ ಮೂವರೂ ಪೋಲೀಸ್ ಅತಿಥಿ ಗೃಹದತ್ತ ನಡೆದರು. ಅಲ್ಲಿ ದೀಪಗಳೆಲ್ಲ ನಂದಿ ಕತ್ತಲೆಯು ಆವರಿಸಿದ್ದರಿಂದ ಈ ಮೂವರಿಗೂ ಕೆಲಸ ಮಾಡುವುದು ಸುಲಭವಾಯಿತು. ನಿಂಗ ಮತ್ತು ಕಣ್ಣನ್ ಕಾಯುಲು ನಿಂತರು. ಜಾರ್ಜ್ ಜೀಪಿನ ಕೆಳಭಾಗದಲ್ಲಿ ಮಲಗಿ ಬ್ರೇಕ್ ಒಂದೆರಡು ಸಲ ಉಪಯೋಗಿಸಿದ ನಂತರ ಆಯು ತಪ್ಪುವಂತೆ ಮಾಡುವುದರಲ್ಲಿ ನಿರತನಾದ.

ವೀರೇಂದ್ರ ಮತ್ತು ಅವರ ಸಂಗಡಿಗರಿಗೆ ಗಾಮಾ ಮತ್ತು ಸಂಗಡಿಗರು ಎಲ್ಲಿ ಇಳಿದುಕೊಂಡಿದ್ದಾರೆ ಎಂಬುದು ಗೊತ್ತಿತ್ತು. ಹೀಗಾಗಿ ಮೂವರೂ ರಾತ್ರಿಯ, ಹೊತ್ತು ಗಾಮಾನು ಇಳಿದುಕೊಂಡ ತಾಣದತ್ತ ನಡೆದರು. ಗಾಮಾನು ಎಲ್ಲಿ ಹೋಗುತ್ತಿದ್ದಾನೆ ಎಂಬುದರ ಸುಳಿವು ಈ ಮೂವರಿಗೂ ಇರಲಿಲ್ಲ. ಹೀಗಾಗಿ ಗಾಮಾನನ್ನು ಆ ಕೂಡಲೇ ತನ್ನೊಡನೆ ಬರುವಂತೆ ಮನವೊಲಿಸಬೇಕೆಂದು ಅವರು ಬಯಸಿದ್ದರು. ಆದರೆ ಗಾಮಾನು ಈಗಾಗಲೇ ಋಷಿಮುನಿಗಳ, ಸಿದ್ಧರ ಮತ್ತು ಬ್ರಹ್ಮಜ್ಞಾನಿಗಳ ಸಂಗಡ ಹೇಗೆ ಮಾತನಾಡಬೇಕು ಎಂಬುದನ್ನು ಕುರಿತು ಟಿಪ್ಪಣಿ ಮಾಡಿಕೊಳ್ಳುವುದರಲ್ಲಿ ತೊಡಗಿದ್ದ. ಆದರೆ ತನ್ನ ಲೋಕದ ಮೂವರೂ ತನ್ನೆಡೆಗೆ ಬರುತ್ತಿದ್ದಾರೆ ಎಂಬುದು

ಗಾಮಾನಿಗೆ ಗೊತ್ತಾಯಿತು. ಹೀಗಾಗಿ ಆತನು 'ನನ್ನನ್ನು ಹುಡುಕಿ ಪ್ರಯೋಜನವಿಲ್ಲ. ನಾನು ನಿಮ್ಮೊಡನೆ ಬರಲಾರೆ' ಎಂಬ ಒಂದು ಕಾಗದವನ್ನು ತನ್ನ ಟೇಬಲ್ ಮೇಲೆ ಇಟ್ಟು ಮಾಯವಾಗಿಬಿಟ್ಟ.

ವೀರೇಂದ್ರ ಮತ್ತು ಸಂಗಡಿಗರು ಅಲ್ಲಿಗೆ ಬಂದಾಗ ಈ ಕಾಗದವನ್ನು ನೋಡಿ ನಿರಾಶರಾದರು. ಮಾಯವಾದ ಗಾಮಾನನ್ನು ಹುಡುಕಲು ತಾವೂ ಕೂಡ ಮಾಯವಾಗಿ ಹುಡುಕಿದರು. ಆದರೆ ಗಾಮಾನ ಅಸ್ತಿತ್ವ ಅಲ್ಲಿ ಎಲ್ಲಿಯೂ ಅವರಿಗೆ ಕಂಡುಬರಲಿಲ್ಲ.

೨೧

ಮರುದಿನ ಬೆಳಿಗ್ಗೆ ಹೆಚ್ಚೂ ಕಡಿಮೆ ಒಂದೇ ಸಮಯದಲ್ಲಿ ನಾಲ್ಕು ಸಂಗಡಗಳು ಚಿಕ್ಕಮಗಳೂರಿನತ್ತ ನಡೆದವು. ಆ ಪ್ರದೇಶವನ್ನು ತಮ್ಮ ತಾಣವನ್ನಾಗಿ ಮಾಡಿಕೊಂಡು ಮುಂದೆ ಹೊರಡಬೇಕೆಂದು ಅವರೆಲ್ಲಾ ನಿರ್ಧರಿಸಿದ್ದರು. ಕೆಲಸಮಯದ ನಂತರ ಚಂಡೀದಾಸನ ಜೀಪು ಹತೋಟಿ ತಪ್ಪುತ್ತಿರುವುದನ್ನು ದೂರದಿಂದ ಗಾಮಾ ಗಮನಿಸಿದ. ಚಂಡೀದಾಸನು ಇಳಿಜಾರಿನಲ್ಲಿ ಬ್ರೇಕ್ ಹಾಕಲು ಪ್ರಯತ್ನಿಸಿ ವಿಫಲನಾದ. ಜೀಪು ಯಾವ ನಿಯಂತ್ರಣಕ್ಕೂ ಒಳಗಾಗದೇ ಚಂಡೀದಾಸನ ಸಾವಿನತ್ತ ಧಾವಿಸುತ್ತಿತ್ತು. ಇಷ್ಟರಲ್ಲಿ ಗಾಮಾನ ಕಾರು ಜೀಪನ್ನು ಸಮೀಪಿಸಿತ್ತು. ಕೂಡಲೇ ಗಾಮಾನು ಮಾಯವಾಗಿ ಜೀಪನ್ನು ಪ್ರವೇಶಿಸಿದ. ತನ್ನ ಪ್ರಾಣವು ಈಗ ದೈವದ ಕೈಯಲ್ಲಿ ಮಾತ್ರ ಇದೆ ಎಂದು ಭಾವಿಸಿ ಕುಳಿತ್ತಿದ್ದ ಚಂಡೀದಾಸನಿಗೆ ಒಮ್ಮೆಲೇ ತನ್ನ ಜೀಪು ಮತ್ತೆ ನಿಯಂತ್ರಣಕ್ಕೆ ಸಿಕ್ಕಿದುದು ಗೋಚರವಾಯಿತು. ಇಷ್ಟರಲ್ಲಿ ಗಾಮಾ ಚಂಡೀದಾಸನ ಪಕ್ಕದ ಸೀಟಿನಲ್ಲಿ ಪ್ರತ್ಯಕ್ಷನಾಗಿ ಬ್ರೇಕನ್ನು ಅದುಮಿದ. ಜೀಪು ಕಿರುಚುತ್ತಾ ಒಂದು ಭಾಗದಲ್ಲಿ ನಿಂತುಕೊಂಡಿತು. ಈ ಮೊದಲೇ ಪ್ರಾಣಭಯದಿಂದ ತತ್ತರಿಸಿ ಹೋಗಿದ್ದ ಚಂಡೀದಾಸನು ಈಗ ಅಪ್ರತ್ಯಕ್ಷದರ್ಶಿಯೊಬ್ಬನು ಪ್ರತ್ಯಕ್ಷನಾಗಿ ತನ್ನ ಪ್ರಾಣವನ್ನು ಉಳಿಸಿದ್ದನ್ನು ಕಂಡು ದಂಗುಬಡಿದು ಹೋದನು. ಗಾಮಾ 'ಹೆದರಿಕೊಳ್ಳಬೇಡಿ, ನಾನು

ಪಿಶಾಚಿಯಲ್ಲ', ಎಂದು ಹೇಳಿ ಜೀಪಿನಿಂದ ಇಳಿದು ತನ್ನ ಕಾರಿನತ್ತ ನಡೆದು ಹೋದನು.

ದೂರದಿಂದ ಈ ದೃಶ್ಯವನ್ನು ವೀಕ್ಷಿಸುತ್ತಿದ್ದ ಕದೀಮರಿಗೆ ಬಹಳ ಆಶ್ಚರ್ಯವಾಯಿತು. ಚಂದೀದಾಸನು ಯಾಸನ ನಂತರವೂ ತಮ್ಮನ್ನು ಹಿಂಬಾಲಿಸುತ್ತಿರುವುದು ಅವರಿಗೆ ಈಗ ಖಚಿತವಾಗಿ ಗೊತ್ತಾಗಿತ್ತು. ಹೀಗಾಗಿ ಚಂದೀದಾಸನು ಮರಣ ಹೊಂದಿದರೆ ನಮ್ಮ ಪೀಡೆ ತೊಲಗಿದಂತೆ ಎಂದು ಅವರು ಭಾವಿಸಿದ್ದರು. ಆದರೆ ಈಗ ಚಂದೀದಾಸನು ಶಿವಾಜಿಯೊಡನೆ ಬದುಕಿ ಉಳಿದಿರುವುದು ಅಲ್ಲದೇ, ಯಾವುದೋ ಅಗಾಧಶಕ್ತಿಯ ಮೂಲಕ ಜೀಪನ್ನು ಹತೋಟಿಗೆ ತಂದುದನ್ನು ಕಣ್ಣಿನಿಂದ ನೋಡಿದ್ದರು. ಹೀಗಾಗಿ ಗಾಮಾನನ್ನು ಅವರು ಅಪಾಯದ ವ್ಯಕ್ತಿಯೆಂದು ಪರಿಗಣಿಸಿದರು. ತಾವು ಹೋಗುತ್ತಿದ್ದ ಸ್ಥಳಕ್ಕೆ ಗಾಮಾ ಹೊರಟಿದ್ದಾನೆ ಎಂದು ಮಾತ್ರ ಅವರಿಗೆ ಕೊಂಚವೂ ಗೊತ್ತಿರಲಿಲ್ಲ.

ವೀರೇಂದ್ರ, ಶಾಂತಲಾ ಮತ್ತು ಗುರು ಮಾತ್ರ ಗಾಮಾನು ಕೊನೆಯ ಪಕ್ಷ ಎಲ್ಲಿಗೆ ಹೋಗುತ್ತಿದ್ದಾನೆ ಎಂಬುದನ್ನು ತಿಳಿದುಕೊಳ್ಳುವುದಕ್ಕೋಸ್ಕರ ಬಹು ದೂರದಿಂದ ಅವನನ್ನೇ ಹಿಂಬಾಲಿಸಿಕೊಂಡು ಬರುತ್ತಿದ್ದರು.

ಚಿಕ್ಕಮಗಳೂರನ್ನು ದಾಟಿ ಬೆಟ್ಟಗಳ ಸಾಲನ್ನು ಪ್ರವೇಶಿಸುತ್ತಿದ್ದಂತೆಯೇ ಅನತಿ ದೂರದಲ್ಲಿ ಒಂದು ತಿರುವಿನಲ್ಲಿ, 'ನೀವೀಗ ಕಬ್ಬಿಣದ ನಾಡನ್ನು ಪ್ರವೇಶಿಸುತ್ತಿದ್ದೀರಿ' ಎಂಬ ನಾಮ ಫಲಕವಿದೆ. ಆ ತಾಣವನ್ನು ಈ ತಂಡಗಳು ತಲುಪುವ ಹೊತ್ತಿಗೆ ಸಂಜೆಯಾಗಿತ್ತು. ಅಲ್ಲಿಂದ ಮುಂದೆ ನೋಡಿದರೆ ಒಂದು ಕಡೆ ಕರ್ನಾಟಕದಲ್ಲಿಯೇ ಹೆಚ್ಚು ಎತ್ತರ ಶಿಖರವೆನಿಸಿದ ಮುಳ್ಳಯ್ಯನಗಿರಿ ಇದೆ. ಇನ್ನೊಂದೆಡೆ ತನ್ನ ಕತ್ತನ್ನು ಚಾಚಿ ನಿಂತಿರುವ ಕಬ್ಬಿಣದ ಅದುರಿನ ಒಂದು ವಿಶಾಲವಾದ ಪರ್ವತಶ್ರೇಣಿಯಿದೆ. ಇವೆರಡರ ಮಧ್ಯದಲ್ಲಿ ರಾಜ ಮಾರ್ಗವು ಹಲವಾರು ಕಾಫೀ ತೋಟಗಳ ಮಧ್ಯೆ ನುಸುಳಿಕೊಂಡು ಬಾಬಾಬುಡನ್ ಗಿರಿಯನ್ನು ಸೇರುತ್ತದೆ. ಮುಳ್ಳಯ್ಯನಗಿರಿಯನ್ನು ಹತ್ತಲು ರಸ್ತೆಯ ಪಕ್ಕದಲ್ಲಿ ಮೆಟ್ಟಿಲುಗಳಿವೆ. ತುದಿಯಲ್ಲಿ ಹೋಗಿ ನಿಂತು ನೋಡಿದರೆ ಸುಮಾರು ಐವತ್ತು ಮೈಲು ಸುತ್ತಳತೆಯಲ್ಲಿರುವ ಹಸಿರು ಪ್ರದೇಶವು ಕಾಣುತ್ತದೆ. ಗಿರಿಯ ಕೆಳಭಾಗದ ಆಚೆಯ ಕಡೆ ಒಂದು

ಕಾಲುದಾರಿಯು ಹೋಗುತ್ತದೆ. ಇದು ಪುರಾತನವಾದ ಒಂದು ಈಶ್ವರ ದೇವಾಲಯಕ್ಕೆ ನಮ್ಮನ್ನು ಕರೆದೊಯ್ಯುತ್ತದೆ. ಈ ದೃಶ್ಯವನ್ನು ನೋಡಿದ ಯಾರಿಗಾದರೂ ಕರ್ನಾಟಕದ ಮಲೆನಾಡಿನ ಸೌಂದರ್ಯ ಮತ್ತು ವೈಭವದ ಅರಿವು ಏಕಕಾಲಕ್ಕೆ ಮನಸ್ಸಿಗೆ ತಾಗುತ್ತದೆ.

ಈ ತಾಣವನ್ನು ದೂರದಿಂದಲೇ ಕಂಡ ಗಾಮಾ ಇಲ್ಲಿಯೇ ನರೇಂದ್ರರು ಸೂಚಿಸಿದ ಗುಹೆ ಇರಬಹುದೆಂದು ಅಂದುಕೊಂಡ. ಹೀಗಾಗಿ ಆ ರಾತ್ರಿ ಅಲ್ಲಿಯೇ ಡೇರೆಗನನ್ನು ಹಂಕಿ ಕಳೆಯಲು ಅತನು ನಿರ್ಧರಿಸಿದ. ಕದೀಮರ ಗುಂಪು ಮಾತ್ರ ಆ ತಾಣದಿಂದ ಬಹಳ ಮುಂದೆ ಹೊರಟು ಹೋಯಿತು. ಚಂಡೀದಾಸನು ಅವರಿಗಾಗಿಯೇ ಬಂದುದರಿಂದ ತನ್ನ ಅತಿಥಿಗಳನ್ನು ಬೆನ್ನಟ್ಟಿ ಹೊರಟುಹೋದ.

ಗಾಮಾನು ಆ ತಾಣದಲ್ಲಿ ಬೀಡು ಬಿಟ್ಟುದುದರಿಂದ ವೀರೇಂದ್ರ ಮತ್ತು ಸಂಗಡಿಗರು ಇನ್ನೊಂದು ಶಿಖರದ ಅಡಿಯಲ್ಲಿ ರಾತ್ರಿಯ ತಮ್ಮ ಬೆಂಕಿಯನ್ನು ಸಿದ್ಧಪಡಿಸಿಕೊಂಡರು.

೨೨

ರಾತ್ರಿಯೆಲ್ಲ ಅಕಾಶವನ್ನು ವೀಕ್ಷಿಸುತ್ತ ಪ್ರಶಾಂತ ಮಲಗಿದ್ದ. ಈ ಮೊದಲು ರಾತ್ರಿಯ ಹೊತ್ತಿನಲ್ಲಿ ಸುಂದರವಾಗಿ ಕಾಣುತ್ತಿದ್ದ ಆಕಾಶವು ಈಗ ವಿಕೃತವಾಗಿ ಕಾಣತೊಡಗಿತ್ತು. ನಕ್ಷತ್ರ ಪುಂಜಗಳಿಗೆ ಅಸ್ತಿತ್ವವೇ ಇಲ್ಲವೆಂದು ಗಾಮಾ ಸಾರಿದ್ದ. ಮೇಲಾಗಿ ಅದಕ್ಕೆ ಸಾಕ್ಷಿ ಎಂಬಂತೆ ಆತನೇ ಪ್ರತ್ಯಕ್ಷ ಪುರಾವೆಗಳನ್ನು ನೀಡಿದ್ದ. ಹೀಗಾಗಿ ಗಾಮಾನ ಅಸ್ತಿತ್ವವೇ ಈಗ ಜೀವನದ ರಹಸ್ಯವನ್ನು ತಿಳಿಯಬಹುದಾದ ಏಕೈಕ ಮಾರ್ಗವೆಂಬಂತಾಗಿತ್ತು. ಆದರೆ ತನ್ನ ಜೀವನದ ರಹಸ್ಯವನ್ನು ಕಂಡುಹಿಡಿಯಲು ಗಾಮಾನು ಬಾಡನ್‌ಗಿರಿಯ ಬೆಟ್ಟಕ್ಕೆ ಬಂದಿದ್ದ !

ಮೂವರೂ ಕದೀಮರು ಮಾತ್ರ ಆ ರಾತ್ರಿಯನ್ನು ಕೆಮ್ಮಣ್ಣುಗುಂಡಿಯ ಗಿರಿಧಾಮದಲ್ಲಿ ಕಳೆಯಲು ನಿಶ್ಚಯಿಸಿ ಆಕಡೆ ತೆರಳಿದ್ದರು. ಅವರನ್ನು ಬೆನ್ನಟ್ಟಿ

ಆಕಾಶದಿಂದ ಇಳಿದವರು
ಹೊರಟ್ಟಿದ್ದ ಚಂಡೀದಾಸನು ಕೂಡ ಅನಿವಾರ್ಯನಾಗಿ ಆ ಕಡೆಯೇ ಹೋಗಿದ್ದ. ಕೆಮ್ಮಣ್ಣ ಗುಂಡಿಯು ಬಹು ಸುಂದರವಾದ ಗಿರಿಧಾಮವಾಗಿದೆ. ಇಲ್ಲಿಂದ ಕಬ್ಬಿಣದ ಅದಿರನ್ನು ತಂತಿಗಳ ಮೇಲೆ ಓಲಾಡುವ ಕಬ್ಬಿಣದ ಬುಟ್ಟಿಗಳಲ್ಲಿ ತುಂಬಿ ಭದ್ರಾವತಿಗೆ ಕಳುಹಿಸಲಾಗುತ್ತದೆ. ಈ ರೋಪವೇ ಇಡೀ ಜಗತ್ತಿನಲ್ಲಿಯೇ ಪ್ರಸಿದ್ಧವಾಗಿದೆ. ಈ ಸುಂದರ ಗಿರಿಧಾಮದಲ್ಲಿ ಮಧ್ಯಮ ವರ್ಗದವರು ಕೂಡ ಕಡಿಮೆ ಹಣ ಕೊಟ್ಟು ಇರಲು ವ್ಯವಸ್ಥೆಯನ್ನು ಸರಕಾರದವರು ಮಾಡಿರುವುದರಿಂದ ಯಾವಾಗಲೂ ಜನ ಇರುತ್ತಾರೆ. ಆದರೆ ಗಲಾಟೆ ಗದ್ದಲಗಳು ಮಾತ್ರ ಕಡಿಮೆ.

ಜಾರ್ಜ್, ಕಣ್ಣನ್ ಮತ್ತು ನಿಂಗರು ಒಂದು ಒಳ್ಳೆಯ ಕಾಟೇಜನ್ನು ಬಾಡಿಗೆಗೆ ಪಡೆದರು. ಸ್ವಂತ ದುಡಿಮೆಯ ಹಣವಲ್ಲವಾದ್ದರಿಂದ ಈ ಮೂವರೂ ನೀರಿನಂತೆ ಹಣವನ್ನು ಯಾವಾಗಲೂ ಖರ್ಚು ಮಾಡುತ್ತಿದ್ದರು. ಇವರು ಯಾವ ಕಾಟೇಜನ್ನು ಪ್ರವೇಶಿಸುತ್ತಾರೆಂಬುದು ಚಂಡೀದಾಸನು ದೂರದಲ್ಲಿ ನಿಂತು ವೀಕ್ಷಿಸುತ್ತಿದ್ದನು. ನಂತರ ಶಿವಾಜಿಯೊಡನೆ, ಆತನು ಆ ಗಿರಿಧಾಮದ ಅಧಿಕಾರಿಯ ಬಳಿ ಬಂದು ತನ್ನ ಕಾರ್ಡನ್ನು ಆತನಿಗೆ ನೀಡಿದನು. ಕೂಡಲೇ ಆ ಅಧಿಕಾರಿಯು ಚಂಡೀದಾಸನು ಸರ್ಕಾರದ ಬೇಹುಗಾರ ಇಲಾಖೆಯಲ್ಲಿ ಬಹು ದೊಡ್ಡ ಸ್ಥಾನದಲ್ಲಿರುವವನು ಎಂದು ಗುರುತಿಸಿದನು. ಆ ಕೂಡಲೇ ಅವನು 'ಏನು ಬೇಕು ಹೇಳಿ ಸರ್, ಎಲ್ಲ ವ್ಯವಸ್ಥೆ ಮಾಡುತ್ತೇನೆ' ಎಂದು ಎದುರು ಕೈ ಜೋಡಿಸಿಕೊಂಡು ನಿಂತ.

'ಇನ್ನೇನೂ ಬೇಡ. ಇದೀಗ ಮೂವರಿಗೆ ಒಂದು ಕಾಟೇಜ್ ಕೊಟ್ಟಿರಲ್ಲ ಅದರ ಪಕ್ಕದಲ್ಲಿಯೇ ಒಂದು ಕಾಟೇಜನ್ನು ನನಗೆ ಕೊಟ್ಟು ಊಟದ ವ್ಯವಸ್ಥೆಯನ್ನು ಮಾಡಿ' ಎಂದ ಚಂಡೀದಾಸ. ಗಿರಿಧಾಮದ ಅಧಿಕಾರಿಯು 'ಆಗಲಿ ಸರ್' ಎಂದವನೇ ಚಂಡೀದಾಸನನ್ನು ಕರೆದುಕೊಂಡು ಕದೀಮರು ಇಳಿದುಕೊಂಡ ಕಾಟೇಜಿನತ್ತ ನಡೆದ.

ಆಗಲೇ ಕತ್ತಲಾವರಿಸಿ ಆ ಗಿರಿಧಾಮದಲ್ಲಿ ಮಿಣಿ ಮಿಣಿ ದೀಪಗಳು ಉರಿಯುತ್ತಿದ್ದವು. ಚಂಡೀದಾಸನಿಗೆ ಒಂದು ಒಳ್ಳೆಯ ಕಾಟೇಜನ್ನು ಕೊಟ್ಟ ನಂತರ ಅಧಿಕಾರಿಯು ಊಟದ ವ್ಯವಸ್ಥೆಯನ್ನು ಮಾಡಲು ಹೊರಟು ಹೋದನು. ಅವನು ಹೋದ ಕೂಡಲೇ ಚಂಡೀದಾಸನು ತನ್ನ ರಿವಾಲ್ವರನ್ನು

ತನ್ನ ಜೇಬಿನಲ್ಲಿ ತುರುಕಿಕೊಂಡು, ಶಿವಾಜಿಗೆ ಅಲ್ಲಿಯೇ ಇರಲು ಹೇಳಿ ಕದೀಮರ ಕಾಟೇಜಿನತ್ತ ಹೆಜ್ಜೆ ಹಾಕಿದನು.

ಅವರ ರೂಮಿನಿಂದ ಮಿಣಿ ಮಿಣಿ ಬೆಳಕು ಹೊರಬರುತ್ತಿತ್ತು. ಅದು ನಿರ್ಜನ ಪ್ರದೇಶವಾದುದರಿಂದ ಚಂಡೀದಾಸನನ್ನು ಅಲ್ಲಿ ಯಾರೂ ಗುರುತಿಸುವ ಸಾಧ್ಯತೆ ಇರಲಿಲ್ಲ. ಚಂಡೀದಾಸನು ಕಿಟಕಿಯ ಮೂಲಕ ಒಳಗೆ ಇಣಿಕಿ ನೋಡಿದನು. ಟೇಬಲ್ ಮೇಲೆ ರಮ್ ಬಾಟಲ್ ಒಂದನ್ನು ಇಟ್ಟುಕೊಂಡು ಮೂವರೂ ಮಾತಿನಲ್ಲಿ ಮಗ್ನರಾಗಿದ್ದರು.

'ಆ ನನಮಗ ಚಂಡೀದಾಸ ನಮ್ಮ ಬೆನ್ನಟ್ಟಿ ಬಂದ್ಹಾನೆ' ಎಂದ ನಿಂಗ.

'ಹೌದು ಅವನಿಗೆ ಏನಾದರೂ ಮಾಡಲೇ ಬೇಕು' ಎಂದ ಜಾರ್ಜ್.

'ಮಾಡೋದೇನು? ಹೇಗೂ ಅವನು ಇಲ್ಲಿವರೆಗೆ ಬಂದುಬಿಟ್ಟಿದ್ದಾನೆ. ಈ ನಿರ್ಜನ ಪ್ರದೇಶದಲ್ಲಿ ಅವನನ್ನು ಮುಗಿಸಿ ಬಿಡೋಣ ಹೇಳ್ರಿ' ಎಂದ ಕಣ್ಣನ್.

'ಅದೀಗ ಸರಿಯಾದ ಯೋಚನೆ. ಎಷ್ಟೊತ್ತಿಗೆ? ಎಲ್ಲಿ? ಅಂತ ಹೇಳಿಬಿಡ್ರಿ ಸಾಕು. ಮುಂದಿನದನ್ನ ನಾನು ನೋಡಿಕೊಳ್ತೇನಿ' ಎಂದ ಕುಡಿದ ಅಮಲಿನಲ್ಲಿದ್ದ ನಿಂಗ.

'ಇಂದು ರಾತ್ರಿ ಒಂದು ಗಂಟೆಗೆ, ಅವನು ಎಲ್ಲಿದ್ರೂ ಸರಿ ಅವನನ್ನ ಮುಗಿಸಬೇಕು' ಎಂದ ನಿಂಗ.

ಇದಕ್ಕೆ ಉಳಿದ ಇಬ್ಬರು ಸಮ್ಮತಿಸಿದರು.

ಅವರ ಮಾತನ್ನು ಕೇಳಿ ಚಂಡೀದಾಸನು ಮನಸ್ಸಿನಲ್ಲಿಯೇ ನಕ್ಕನು. ಆ ಮೂವರ ಹೆಡ್ಡತನವನ್ನು ಬಯಲಿಗೆಳೆಯಬೇಕೆಂದು ನಿರ್ಧರಿಸಿಕೊಂಡನು. ಚಂಡೀದಾಸನು ತನ್ನ ಕಾಟೇಜಿಗೆ ಮರಳಿ ಶಿವಾಜಿಯೊಡನೆ ಮುಂದಿನ ಕಾರ್ಯವನ್ನು ಕುರಿತು ಚರ್ಚಿಸಿದನು. ತಾವು ಆ ಕೂಡಲೇ ಕಾಟೇಜನ್ನು ಖಾಲಿ ಮಾಡಿ ಬೇರೆ ಎಲ್ಲಿಯಾದರೂ ಆ ರಾತ್ರಿಯನ್ನು ಕಳೆಯಬೇಕೆಂದು ಆತನು ನಿರ್ಧರಿಸಿದನು. ಆ ಬಗ್ಗೆ ಚರ್ಚಿಸಲು ಚಂಡೀದಾಸನು ಗಿರಿಧಾಮದ ಅಧಿಕಾರಿಯ ಬಳಿ ಹೋದನು. ಈ ತರಹದ ಮೂವರು ವ್ಯಕ್ತಿಗಳು ಗಿರಿಧಾಮದಲ್ಲಿ ಇದ್ದಾರೆ ಎಂಬ ವಿಷಯವು ತಿಳಿದೊಡನೆ ಆ ಅಧಿಕಾರಿಯ ಕೈಕಾಲುಗಳು ನಡುಗಲು ಪ್ರಾರಂಭಿಸಿದವು. ಚಿಕ್ಕಮಗಳೂರಿನ ಜಿಲ್ಲಾ ಪೊಲೀಸ್ ಠಾಣೆಗೆ

ಫೋನ್ ಮಾಡುವ ಕಾತುರವನ್ನು ಆ ಅಧಿಕಾರಿಯು ವ್ಯಕ್ತಪಡಿಸಿದನು. ಆದರೆ ಚಂಡೀದಾಸನು ಆತನಿಗೆ ಧೈರ್ಯವನ್ನು ತುಂಬಿ ಗಾಬರಿಯಾಗದಿರುವಂತೆ ತಿಳಿಸಿದನು. ಕೊನೆಗೆ ಚಂಡೀದಾಸ ಮತ್ತು ಶಿವಾಜಿಯು ಆ ರಾತ್ರಿಯನ್ನು ಆ ಅಧಿಕಾರಿಯ ಆಫೀಸಿನಲ್ಲಿಯೇ ಕಳೆಯುವುದೆಂದು ಗೊತ್ತಾಯಿತು. ಆದರೆ ಆ ಅಧಿಕಾರಿಯು ಆ ರಾತ್ರಿ ಸ್ವತಃ ತಾನು ತನ್ನ ಆಫೀಸಿನಲ್ಲಿ ಕಳೆಯುಲು ಒಪ್ಪಲಿಲ್ಲ. ಆದರೆ ಶಿವಾಜಿ ಮತ್ತು ಚಂಡೀದಾಸನಿಗೆ ರಾತ್ರಿ ಅಲ್ಲಿ ತಂಗಲು ವ್ಯವಸ್ಥೆ ಮಾಡುವುದಾಗಿ ಹೇಳಿದನು. ಇದಕ್ಕೆ ಚಂಡೀದಾಸನು ಸಮ್ಮತಿಸಿದನು. ಏಕೆಂದರೆ, ಆ ಮೂವರೂ ಕದೀಮರು ಆಫೀಸಿನಲ್ಲಿ ಅವನು ಇರಬಹುದೆಂದು ಯೋಚಿಸಲಾರರು ಎಂದು ಅವನು ಬಗೆದಿದ್ದ. ಆ ಕೂಡಲೇ ಶಿವಾಜಿ ಮತ್ತು ಚಂಡೀದಾಸರ ಸಾಮಾನುಗಳನ್ನು ಆಫೀಸಿಗೆ ವರ್ಗಾಯಿಸಲಾಯಿತು.

ಜಾರ್ಜ್, ಕಣ್ಣನ್ ಮತ್ತು ಸಿಂಗರು ರಾತ್ರಿ ಒಂಬತ್ತು ಗಂಟೆಯ ನಂತರ ಚಂಡೀದಾಸನಿಗಾಗಿ ಹುಡುಕಾಟವನ್ನು ಪ್ರಾರಂಭಿಸಿದರು. ಅವರು ಚಂಡೀದಾಸನ ವಿಳಾಸವನ್ನು ಆಫೀಸಿನಲ್ಲಿಯೇ ಕೇಳಬೇಕಾಗಿತ್ತಾದ್ದರಿಂದ ನೇರವಾಗಿ ಆಫೀಸಿಗೆ ಬಂದರು. ಒಳಗಿನಿಂದ ಬಾಗಿಲು ಹಾಕಿತ್ತು. ಅಧಿಕಾರಿಯ ಗೈರುಹಾಜರಿಯಲ್ಲಿ ಶಿವಾಜಿ ಮತ್ತು ಚಂಡೀದಾಸರು ಒಳಗೇ ಇದ್ದರು. ಕಿಂಡಿಯ ಮೂಲಕ ಕದೀಮರನ್ನು ಶಿವಾಜಿಯು ಗುರುತಿಸಿದ. ಸೋಫಾದ ಕೆಳಗೆ ರಿವಾಲ್ವರ್ ಹಿಡಿದು ತಾನು ಇರುವುದಾಗಿಯೂ, ಶಿವಾಜಿಯು ಆಫೀಸಿನ ಅಟೆಂಡರ್‌ನಂತೆ ವರ್ತಿಸಬೇಕೆಂದೂ ಚಂಡೀದಾಸನು ತಿಳಿಸಿ ಕೂಡಲೇ ಸೋಫಾದ ಕೆಳಗೆ ನುಸುಳಿದ. ...

ಅತ್ತ—

ರಾತ್ರಿಯನ್ನು ಪ್ರಶಾಂತವಾಗಿ ಆಕಾಶವನ್ನು ವೀಕ್ಷಿಸುತ್ತ ಕಳೆಯುತ್ತಿದ್ದ ಪ್ರಶಾಂತನಿಗೆ ಚಂಡೀದಾಸನ ಸ್ಥಿತಿಯು ಏನಾಯಿತೆಂದು ತಿಳಿಯುವ ಕುತೂಹಲ ಉಂಟಾಗಿತ್ತು. ಡೇರೆಯಲ್ಲಿ ಗಾಮಾ ಮತ್ತು ಸರಸ್ವತಿ ಅಧ್ಯಯನದಲ್ಲಿ ತೊಡಗಿದ್ದರು. ಆಗ ಗುಂಡಪ್ಪನ ಕಿವಿಯಲ್ಲಿ ಪ್ರಶಾಂತನು ತನ್ನ ಮನಸ್ಸಿನಲ್ಲಿ ನಡೆಯುತ್ತಿದ್ದ ತುಮುಲವನ್ನು ವಿವರಿಸಿದ. ಚಂಡೀದಾಸನ ಪತ್ತೆಯನ್ನು ಆ ಕಾಡು ಬೆಟ್ಟಗಳಲ್ಲಿ ಹೇಗೆ ಹಚ್ಚುವುದು ಎಂದು ಪ್ರಶಾಂತ ಖಿನ್ನ ಮನಸ್ಕನಾಗಿದ್ದ.

ಆದರೆ ಗುಂಡಪ್ಪನು ಆ ಕೆಲಸವನ್ನು ತನಗೆ ವಹಿಸಬೇಕೆಂದು ಬೇಡಿಕೊಂಡ. ಕತ್ತಲಿನ ಆ ರಾತ್ರಿಯಲ್ಲಿ ಗುಂಡಪ್ಪನನ್ನು ಏಕಾಂಗಿಯಾಗಿ ಹೊರಗೆ ಕಳುಹಿಸುವುದು ಅಪಾಯಕಾರಿ ಎಂದು ಪ್ರಶಾಂತ ಅರಿತಿದ್ದ. ಆದರೆ ಆತನನ್ನು ಚಂಡೀದಾಸನನ್ನು ಹುಡುಕಲು ಕಳುಹಿಸುವುದನ್ನು ಬಿಟ್ಟರೆ ಬೇರೆ ಮಾರ್ಗವೇ ಇರಲಿಲ್ಲ. ಆ ದಿನ ಬೆಳಗ್ಗೆ ಜೀಪಿನ ದುರ್ಘಟನೆಯನ್ನು ಗಾಮಾನು ತಪ್ಪಿಸಿದಾಗಲೇ ಆ ಜೀಪಿನಲ್ಲಿಯ ವ್ಯಕ್ತಿಗೂ ಗಾಮಾನ ಕೆಲಸಕ್ಕೂ ಏನೋ ಸಂಬಂಧವಿದೆಯೆಂದು ಪ್ರಶಾಂತನು ಲೆಕ್ಕ ಹಾಕಿದ್ದ. ತಾವು ಮೂವರೂ ಹೊರಟುಹೋದರೆ ಗಾಮಾನಿಗೆ ಸಂಶಯ ಬರಬಹುದಾಗಿತ್ತು. ಹೀಗಾಗಿ ಗುಂಡಪ್ಪನೊಬ್ಬನನ್ನೇ ಕಳುಹಿಸುವುದು ಅನಿವಾರ್ಯವಾಗಿತ್ತು. ಗುಂಡಪ್ಪನು ತನ್ನ ಒಡೆಯನ ಆಜ್ಞೆಯನ್ನು ಅನುಸರಿಸಲು ಉತ್ಸಾಹದಿಂದ ಎದ್ದು ತನ್ನ ಕಾರಿನ ಬಳಿ ಬಂದ. ಕಾರನ್ನು ಕೆಲದೂರ ತಳ್ಳಿಕೊಂಡು ಹೋದ. ಕಾರನ್ನು ಶುರು ಮಾಡಿದ್ದರೆ ಗಾಮಾನಿಗೆ ಅದರ ಸುಳಿವು ಸಿಕ್ಕಬಹುದಾಗಿತ್ತು. ಆದರೆ ಕಾರನ್ನು ತಳ್ಳಿಕೊಂಡು ಕೆಲದೂರ ಹೋದುದರಿಂದ ಗುಂಡಪ್ಪನ ನಿರ್ಗಮನ ಗಾಮಾನ ಗಮನಕ್ಕೆ ಬರಲೇ ಇಲ್ಲ.

ಆ ದಾರಿಯಲ್ಲಿ ಕ್ರಮೇಣ ಕ್ರಮಿಸುತ್ತಿರುವಂತೆ ಗುಂಡಪ್ಪನಿಗೆ ಜೀಪಿನ ವ್ಯಕ್ತಿ ಕೆಮ್ಮಣ್ಣುಗುಂಡಿಯ ಗಿರಿಧಾಮದಲ್ಲಿ ವಾಸವಾಗಿರುವುದೊಂದನ್ನು ಬಿಟ್ಟು ಬೇರೆ ಸಾಧ್ಯತೆಗಳೇ ಕಾಣಲಿಲ್ಲ. ಹೀಗಾಗಿ ಕೆಮ್ಮಣ್ಣುಗುಂಡಿಯ ಮಾರ್ಗವನ್ನು ಹಿಡಿದು ಆ ರಾತ್ರಿಯಲ್ಲಿ ಗುಂಡಪ್ಪನು ತನ್ನ ಕಾರನ್ನು ಓಡಿಸಿದನು.

ಆ ಗಿರಿಧಾಮವನ್ನು ತಲುಪಿದೊಡನೆ ಕಾರುಗಳನ್ನು ನಿಲ್ಲಿಸುವ ಸ್ಥಳಕ್ಕೆ ಮೊದಲು ಗುಂಡಪ್ಪ ಹೋದ. ಇದಕ್ಕೆ ಎರಡು ಕಾರಣಗಳಿದ್ದವು. ಮೊದಲನೆಯದಾಗಿ ತಾನು ಬೆಳಗ್ಗೆ ಕಂಡ ಜೀಪು ಅಲ್ಲಿ ಇರುವುದೇ ಎಂಬುದನ್ನು ಮೊದಲು ಪರೀಕ್ಷಿಸಬೇಕಿತ್ತು. ಇನ್ನು ಎರಡನೆಯದಾಗಿ ತನ್ನ ಕಾರನ್ನು ಅಲ್ಲಿ ಬಿಡಬೇಕಾಗಿತ್ತು. ತನ್ನ ಕಾರನ್ನು ಇಳಿಸುವನೇ ಅಲ್ಲಿ ನಿಂತ ಕೆಲವೇ ವಾಹನಗಳಲ್ಲಿ ತಾನು ಬೆಳಗ್ಗೆ ಕಂಡ ಜೀಪು ಇರುವುದನ್ನು ಗುಂಡಪ್ಪ ಕಂಡುಹಿಡಿದ. ಇದರಿಂದ ಗುಂಡಪ್ಪನಿಗೆ ಬಹಳ ಆನಂದವಾಯಿತು. ಆ ಕೂಡಲೇ ಆತನು ಜೀಪಿನ ವ್ಯಕ್ತಿ ಎಲ್ಲಿ ಇಳಿದುಕೊಂಡಿದ್ದಾನೆ ಎಂಬುದನ್ನು ಪತ್ತೆ

ಹಚ್ಚಲು ಆ ಗಡಿಬಿಡಿಯಿಂದ ಆಫೀಸಿನತ್ತ ಧಾವಿಸಿದ. ಆತನು ಆಫೀಸನ್ನು ಸಮೀಪಿಸುತ್ತಿದ್ದಂತೆ ಮೂವರೂ ಕೈದಿಗಳು ಬಾಗಿಲನ್ನು ಬಡಿಯುತ್ತಿದ್ದುದು ಕಂಡಿತು. ಇನ್ನೇನು ಆಫೀಸು ಬಾಗಿಲು ತೆರೆಯುತ್ತದೆ ಎಂದುಕೊಂಡ ಹಿಂಬದಿಯಿಂದ ಬರುತ್ತಿದ್ದ ಗುಂಡಪ್ಪನಿಗೆ ಕಿಟಕಿಯ ಮೂಲಕ ವಿಚಿತ್ರ ದೃಶ್ಯವೊಂದು ಕಂಡಿತು. ಇದ್ದಕ್ಕಿದ್ದ ಹಾಗೆ ವ್ಯಕ್ತಿಯೊಂದು ಸೋಫಾದ ಕೆಳಗೆ ನುಸುಳುತ್ತಿರುವುದನ್ನು ಕಂಡ. ಇಲ್ಲಿ ಏನೋ ಮಹತ್ವದ್ದು ನಡೆಯುತ್ತಿದೆ ಎಂದು ಭಾವಿಸಿ ಕೂಡಲೇ ಕಿಟಕಿಯ ಹಿಂಬದಿಗೆ ಸರಿದು ನಡೆಯುತ್ತಿದ್ದ ದೃಶ್ಯವನ್ನು ವೀಕ್ಷಿಸುತ್ತಾ ನಿಂತ.

ಶಿವಾಜಿಯು ಬಾಗಿಲನ್ನು ತೆರೆದ. ಮೂವರೂ ಕೈದಿಗಳು ಒಳ ಪ್ರವೇಶಿಸಿದರು. ಜಾರ್ಜ್ ಕೇಳಿದ 'ಆಫೀಸರ್ ಎಲ್ಲಿ'? ಶಿವಾಜಿ ಉತ್ತರಿಸಿದ, 'ಅವರು ಈ ರಾತ್ರಿ ಇಲ್ಲಿ ಇಲ್ಲ'. 'ಜೈಲಿಗೆ ಜೀಪಿನಾಗೆ ಇಬ್ಬರು ಬಂದಿದ್ದಾರೆ. ಅವರು ಎಲ್ಲಿದ್ದಾರೆ ಅಂತ ನಿನಗೇನಾದರೂ ಗೊತ್ತಾ'? ಕಣ್ಣನ್ ಕೇಳಿದ. 'ಇಲ್ಲ ನಾನು ಈಗ ಬಂದಿದ್ದೇನೆ, ಬೆಳಗ್ಗೆ ಬಂದರೆ ನಿಮಗೆ ಎಲ್ಲಾ ಗೊತ್ತಾಗುತ್ತೆ' ಎಂದು ಶಿವಾಜಿ ಉತ್ತರಿಸಿದ. ಆತನ ಮಾತಿನಲ್ಲಿ ನಂಬಿಕೆ ಇಡಬೇಕೋ ಬೇಡವೋ ಎಂದು ಮೂವರು ಯೋಚಿಸುತ್ತಾ ನಿಂತಾಗ ನಿಂಗನ ದೃಷ್ಟಿ ಟೇಬಲ್ ಮೇಲೆ ಇದ್ದ ಚಂಡೀದಾಸನ ಬ್ಯಾಗ್ ಮೇಲೆ ಹರಿಯಿತು. ಅದರ ಮೇಲೆ ಚಂಡೀದಾಸನ ಹೆಸರು ಇದ್ದುದರಿಂದ ಉಳಿದ ಇಬ್ಬರಿಗೂ ಅವನು ಅದನ್ನು ತೋರಿಸಿದ ಕೂಡಲೇ ಜಾರ್ಜ್ ಬಾಗಿಲನ್ನು ಇಕ್ಕಿ ಒಳಗಿನ ಅಗುಣಿಯನ್ನು ಹಾಕಿದ. ಚಂಡೀದಾಸನು ಉಸಿರು ಬಿಗಿ ಹಿಡಿದು ತನ್ನ ರಿವಾಲ್ವರನ್ನು ಅಣಿಮಾಡಿ ಇಟ್ಟುಕೊಂಡಿದ್ದ. ಗುಂಡಪ್ಪ ಕುತೂಹಲದಿಂದ ತುದಿಗಾಲಿನ ಮೇಲೆ ನಿಂತು ಈ ದೃಶ್ಯವನ್ನು ನೋಡುತ್ತಿದ್ದ. ಕೂಡಲೇ ನಿಂಗ ತನ್ನ ಜೇಬಿನಿಂದ ನೀಳವಾದ ಚಾಕುವನ್ನು ಹೊರತೆಗೆದ.

'ಹೆಚ್ಚು ಗಲಾಟೆ ಬೇಡ. ಸುಮ್ಮನೆ ಚಂಡೀದಾಸ ಎಲ್ಲಿದ್ದಾನೆ ಹೇಳಿಬಿಡು. ಇಲ್ಲವಾದರೆ ಒಂದು ಕ್ಷಣದಲ್ಲಿ ನಿನ್ನನ್ನು ಮುಗಿಸುತ್ತೇವೆ.' ಎಂದ ಕಣ್ಣನ್ ಗಂಭೀರವಾಗಿ. ಶಿವಾಜಿಗೆ ಈಗ ಏನು ಮಾಡಬೇಕೆಂದು ತೋಚಲಿಲ್ಲ. ಆದರೂ ಗಡಸು ಧ್ವನಿಯಲ್ಲಿ 'ಯಾವ ಚಂಡೀದಾಸನೂ ನನಗೆ

ಗೊತ್ತಿಲ್ಲ. ಬೇಕಿದ್ದರೆ ನನ್ನ ಸಾಹೇಬರನ್ನು ಈಗಲೇ ಕರೆದುಕೊಂಡು ಬರುತ್ತೇನೆ. ನೀನು ಬನ್ನಿ!' ಎಂದ. ಈ ಮಾತು ಮುಗಿಯುತ್ತಿದ್ದಂತೆಯೇ ನಿಂಗನ ಚಾಕುವಿನ ತುದಿಯು ಶಿವಾಜಿಯ ಕುತ್ತಿಗೆಯ ಒಂದು ಭಾಗದಲ್ಲಿ ಒಂದು ನೂಲಿನಷ್ಟು ಒಳಸೇರಿತು. ರಕ್ತವು ಆ ಭಾಗದಿಂದ ಜಿನುಗುತ್ತಿತ್ತು. ಬಾಯಿ ಬಿಡಲಾರದೆ ಶಿವಾಜಿಯು ಒದ್ದಾಡುತ್ತಿದ್ದನು. ಸೋಫಾದ ಕೆಳಗೆ ವ್ಯಕ್ತಿಯೊಂದು ಇದೆಯೆಂದು ಗುಂಡಪ್ಪನಿಗೆ ಗೊತ್ತಿತ್ತು. ಹೀಗಾಗಿ ತಾನು ಮಧ್ಯ ಪ್ರವೇಶಿಸಲು ಇದೇ ಸರಿಯಾದ ಸಮಯವೆಂದು ಗುಂಡಪ್ಪ ನಿರ್ಧರಿಸಿದ. ತನ್ನ ಜೇಬಿನಲ್ಲಿದ್ದ ಚಿಕ್ಕ ಚಾಕುವೊಂದನ್ನು ಹೊರ ತೆಗೆದು ಅದನ್ನು ನೇರವಾಗಿ ಗುರಿಯಿಟ್ಟು ನಿಂಗನ ಕೈಯತ್ತ ಎಸೆದ. ಆ ಚಾಕು ಕ್ಷಣಾರ್ಧದಲ್ಲಿ ನಿಂಗನ ಮುಂಗೈಯನ್ನು ಭೇದಿಸಿಕೊಂಡು ಸಿಕ್ಕಿಹಾಕಿಕೊಂಡಿತು. ನಿಂಗನು ವಿಲಿ ವಿಲಿ ಒದ್ದಾಡುತ್ತಾ ಶಿವಾಜಿಯ ಕುತ್ತಿಗೆಯಿಂದ ತನ್ನ ಕೈಯನ್ನು ಹಿಂದೆಳೆದುಕೊಂಡನು. ಚಂಡೀದಾಸನಿಗೆ ಇದಾವುದು ಕಾಣದಿದ್ದರೂ ಶಿವಾಜಿಯ ಮೇಲೆ ಒಂದೆರಗಿದ್ದ ವಿಪತ್ತು ದೂರವಾಯಿತೆಂದು ಗೊತ್ತಾಯಿತು. ಚಾಕುವು ತೂರಿಬಂದ ಕಿಡಕಿಯತ್ತ ಜಾರ್ಜ್ ಮತ್ತು ಕಣ್ಣನ್ ಧಾವಿಸುವುದರೊಳಗಾಗಿ ಗುಂಡಪ್ಪನು ಸರಳುಗಳಿಲ್ಲದ ಅದೇ ಕಿಟಕಿಯ ಮೂಲಕ ರೂಮಿನಲ್ಲಿ ಪ್ರತ್ಯಕ್ಷನಾಗಿದ್ದನು. ಚಂಡೀದಾಸನು ಕೂಡಲೇ ಸೋಫಾದ ಕೆಳಗಿನಿಂದ ಮೇಲೆದ್ದು ಒಂದು ನಿಂತನು. ಆತನು ತನ್ನ ಕೈಯಲ್ಲಿಯ ರಿವಾಲ್ವರನ್ನು ಎತ್ತುವದರೊಳಗಾಗಿ ನಿಂಗನ ಕಾಲು ಆ ಕೈಯನ್ನು ಜೋರಾಗಿ ಒದ್ದಿತ್ತು. ಹೀಗಾಗಿ ರಿವಾಲ್ವರವು ಆ ರೂಮಿನ ಒಂದು ಪಕ್ಕದಲ್ಲಿ ಹೋಗಿ ಬಿದ್ದಿತು. ಈಗ ನಿಂಗನೊಬ್ಬನನ್ನು ಬಿಟ್ಟು ಉಳಿದವರೆಲ್ಲ ನಿರಾಯುಧರಾಗಿ ನಿಂತಿದ್ದರು. ಆದರೆ ನಿಂಗನ ಬಲಗೈ ಗುಂಡಪ್ಪ ಎಸೆದ ಚಾಕುವಿನಿಂದಾಗಿ ಗಾಯಗೊಂಡಿತ್ತು. ಜಾರ್ಜ್ ಮತ್ತು ಕಣ್ಣನ್ ಗುಂಡಪ್ಪನ ಮೇಲೆ ಏಕ ಕಾಲದಲ್ಲಿ ಮುಗಿಬಿದ್ದರು. ಶಿವಾಜಿಯು ನಿಂಗನ ಎಡಗೈಯನ್ನು ಬಲವಾಗಿ ಅಮುಕಿ ಹಿಡಿದು ಆತನನ್ನು ಗೋಡೆಗೆ ತಳ್ಳಿದ. ಚಂಡೀದಾಸನು ಗುಂಡಪ್ಪನ ಮೇಲೆ ಬಿದ್ದ ಇಬ್ಬರು ಖದೀಮರಲ್ಲಿ ಕಣ್ಣನ್‌ನ ಶರಟಿನ ಕಾಲರನ್ನು ಹಿಡಿದು ಹಿಂದೆ ಎಳೆದು ಟೇಬಲ್ ಮೇಲೆ ಅಪ್ಪಳಿಸಿದನು, ಅನಿರೀಕ್ಷಿತವಾಗಿ ಬಂದೆರಗಿದ ಈ ದಾಳಿಯಿಂದಾಗಿ ಖದೀಮನು ಬಹಳ ವಿಹ್ವಲ

ರಾಗಿದ್ದರು. ಆದರೆ ಅವರು ಕುಡಿದಿದ್ದ ರಮ್ ಅವರಲ್ಲಿ ಹೊಸ ಚೈತನ್ಯ ವನ್ನು ತುಂಬಿ ಅಪಾಯವನ್ನು ಲೆಕ್ಕಿಸದೆ ಕಾದಾಡುವಂತೆ ಮಾಡಿತು. ಜಾರ್ಜ್ ಕರಾಟೆಯಲ್ಲಿ ಪ್ರವೀಣನಿದ್ದಂತೆ ತೋರಿತು. ಗುಂಡಪ್ಪನ ಮೇಲೆ ಆತ ಪ್ರಯೋಗಿಸಿದ ಮೊದಲೆರಡು ಪೆಟ್ಟುಗಳಿಂದ ಗುಂಡಪ್ಪನು ಹತಾಶನಾದನು. ಕೂಡಲೇ ಕಣ್ಣನ್‌ನನ್ನು ಗುಂಡಪ್ಪನತ್ತ ಎಸೆದು ಜಾರ್ಜ್‌ನನ್ನು ಎದುರಿಸಲು ಚಂಡೀದಾಸನು ಮುನ್ನುಗ್ಗಿದನು. ಕರಾಟೆಯಲ್ಲಿ ಉತ್ತಮ ತರಬೇತಿಯನ್ನು ಪಡೆದಿದ್ದ ಚಂಡೀದಾಸನು ತನ್ನ ಕೈಚಳಕವನ್ನು ತೋರಲು ಮೊದಲು ಭದ್ರ ವಾಗಿದ್ದ ಮರದ ಕುರ್ಚಿಯೊಂದನ್ನು ತನ್ನ ಒಂದೇ ಹಸ್ತದಿಂದ ಒಂದೇ ಹೊಡೆತಕ್ಕೆ ಮುರಿದು ಆವೇಶವನ್ನು ತುಂಬಿಕೊಂಡನು. ಜಾರ್ಜ್ ಮತ್ತು ಚಂಡೀದಾಸನ ಮಧ್ಯ ಭಯಂಕರವಾದ ಕರಾಟೆ ಯುದ್ಧವೇ ಪ್ರಾರಂಭ ವಾಯಿತು. ಜಾರ್ಜನಿಗೆ ಚಂಡೀದಾಸನ ಕೈಯಲ್ಲಿ ಸಿಕ್ಕುಹಾಕಿಕೊಂಡರೆ ಜೀವನವಿಡೀ ಕಂಬಿಗಳನ್ನು ಎಣಿಸಬೇಕಾಗಬಹುದೆಂಬ ಭಯವಿತ್ತು. ಚಂಡೀ ದಾಸನಿಗೆ ಒಬ್ಬ ಭಯಾನಕ ಅಪರಾಧಿಯೊಡನೆ ಸೆಣಸಾಡುತ್ತಿದ್ದೇನೆ ಎಂಬ ಅರಿವಿತ್ತು. ದೇಶೀಯ ಕುಸ್ತಿಪಟುಗಳ ಮೂಲಕ ಕಣ್ಣನ್‌ನನ್ನು ಬಂಧಿಸಿ ಹಿಡಿದಿದ್ದ ಗುಂಡಪ್ಪನು ಶಿವಾಜಿಯು ನಿಂಗನ ಶಕ್ತಿಗೆ ಬಲಿಯಾಗುತ್ತಿರುವು ದನ್ನು ಕಂಡ. 'ಗಾಯವಾಗಿರುವ ಆತನ ಬಲಗೈಯನ್ನು ತಿರುಚು' ಎಂದು ಗುಂಡಪ್ಪನು ಶಿವಾಜಿಯತ್ತ ಹೊರಳಿ ಕಿರುಚಿಕೊಂಡ. ಆತನ ಲಕ್ಷ್ಯವು ಕ್ಷಣ ಮಾತ್ರ ಬೇರೆಡೆ ತಿರುಗಿದಾಗ ಕಣ್ಣನ್ ಆತನ ಪಟ್ಟಿನಿಂದ ನುಸುಳಿ ಕೊಂಡು ಬಿಡುಗಡೆಯಾದ. ಕಣ್ಣನ್‌ನು ತನ್ನ ಮೇಲೆ ಎರಗುತ್ತಾನೆ ಎಂದು ಭಾವಿಸಿದ್ದ ಗುಂಡಪ್ಪ. ಆದರೆ ಹಾಗಾಗಲಿಲ್ಲ. ಕಣ್ಣನು ಅಲ್ಲಿಯೇ ಬಿದ್ದಿದ್ದ ಮುರಿದ ಕುರ್ಚಿಯ ತುಂಡೊಂದನ್ನು ಕೈಗೆತ್ತಿಕೊಂಡು ರೂಮಿನಲ್ಲಿದ್ದ ಒಂದೇ ಒಂದು ದೀಪವನ್ನು ಹೊಡೆದು ಹಾಕಿದ. ಇಡೀ ದೃಶ್ಯವೇ ಕತ್ತಲಲ್ಲಿ ಮುಳುಗಿತು. ಇಂತಹ ಹಲವಾರು ಪ್ರಸಂಗಗಳನ್ನು ಎದುರಿಸಿದ್ದ ಆ ಕದೀಮರು ಕಿಟಕಿಯ ಮೂಲಕ ಪಾರಾಗಿ ಹೊರಗೆ ಓಡಿದರು. ಚಂಡೀದಾಸನು ಅವರನ್ನು ಹಿಂಬಾಲಿಸಿ ಓಡಿದ. ಬೆಟ್ಟದ ತುದಿಯಲ್ಲಿರುವ ಕೃಷ್ಣರಾಜೇಂದ್ರ ಅತಿಥಿ ಧಾಮದತ್ತ ಕದೀಮರು ಓಡಿ ಮಾಯವಾಗಿ ಬಿಟ್ಟರು. ಚಂಡೀದಾಸನು ಹತಾಶನಾಗಿ ಮರಳಿಬಂದ. ಅಷ್ಟರಲ್ಲಿ ಗುಂಡಪ್ಪನು ಶಿವಾಜಿಯ ಕುತ್ತಿಗೆಗೆ

ಆದ ಗಾಯಕ್ಕೆ ತಣ್ಣೀರನ್ನು ಸವರಿ ಬಟ್ಟೆಯನ್ನು ಕಟ್ಟುತ್ತಿದ್ದ. ಓಡಿಬಂದ ಚಂಡೀದಾಸನು, 'ಆ ಕದೀಮರ ರೂಮನ್ನು ಶೋಧಿಸಲು ಇದೇ ಒಳ್ಳೆಯ ಸಮಯ' ಎಂದನು. ಆತನು ಯಾರೆಂದು ಗೊತ್ತಿರದಿದ್ದರೂ ಗುಂಡಪ್ಪನು ಅವನ ಮಾತಿನಲ್ಲಿ ವಿಶ್ವಾಸವಿಟ್ಟು ನಡೆದ. ಚಂಡೀದಾಸ, ಗುಂಡಪ್ಪ ಮತ್ತು ಶಿವಾಜಿ ಕದೀಮರ ಕಾಟೇಜನ್ನು ಸೂಕ್ಷ್ಮವಾಗಿ ಶೋಧಿಸಿದರು. ಕೊನೆಗೆ ಹೊಟೇಲ್‌ನಿಂದಿ ಕದ್ದು ತಂದಿರುವ ಚಂದರಸ ಇರುವ ಸ್ಥಳದ ನಕ್ಷೆ ಮತ್ತು ಪುರಾವೆಗಳು ಅವರ ಕೈಗೆ ಸಿಕ್ಕವು. ಅವನ್ನು ಪರೀಕ್ಷಿಸಲು ವ್ಯವಧಾನವಿಲ್ಲದೇ ಮೂವರೂ ಆ ನಕ್ಷೆಯೊಂದಿಗೆ ಹೊರಬಂದರು. ಇನ್ನು ಆ ಧಾಮದಲ್ಲಿ ಹೆಚ್ಚು ಹೊತ್ತು ಉಳಿದರೆ ಅಪಾಯವೆಂದು ಅರಿತಿದ್ದ ಚಂಡೀದಾಸನು ಆಫೀಸಿಗೆ ಬಂದು ತನ್ನ ಜೀಪನ್ನು ನಿಲ್ಲಿಸಿದ್ದ ಸ್ಥಳಕ್ಕೆ ಧಾವಿಸಿದನು.

೨೩

ಜೀಪಿನಲ್ಲಿ ಕುಳಿತು ಚಂಡೀದಾಸನು ನಕ್ಷೆಯನ್ನು ಪರೀಕ್ಷಿಸಲು ಆತುರನಾಗಿದ್ದನು. ಆದರೆ ಅದಕ್ಕೆ ಮೊದಲು, 'ನೀವು ಯಾರು'? ಎಂದು ಗುಂಡಪ್ಪನನ್ನು ಕೇಳಿದನು. 'ಅದೇ ಪ್ರಶ್ನೆಯನ್ನು ಕೇಳಲು ನಾನು ಬಹಳ ದೂರದಿಂದ ಬಂದಿರುವೆ' ಎಂದ ಗುಂಡಪ್ಪ.

'ನಾನು ಚಂಡೀದಾಸ್. ಸಿ.ಐ.ಡಿ.ಯ ವಿಶೇಷ ಅಧಿಕಾರಿ'.

'ಹಾಗೋ! ನಾನು ಗುಂಡಪ್ಪ. ಮೈಸೂರಿನ ಪತ್ತೇದಾರಿ ಸಂಸ್ಥೆಯ ಜೋಲ್ಟ್ ಆಫೀಸಿನ ಗೌರವೀಯ ಅಧಿಕಾರಿ'.

'ಓಹೋ ನಿಮ್ಮ ಸಂಸ್ಥೆಯ ಹೆಸರನ್ನು ಬಹಳ ಸಲ ಕೇಳಿದ್ದೇನೆ. ಅಂತೂ ಈ ದಿನ ಅಪಾಯದಿಂದ ಪಾರು ಮಾಡಿದಿರಿ. ಧನ್ಯವಾದಗಳು. ಅದಿರಲಿ ನೀವು ಇಲ್ಲಿಗೆ ಬಂದ ಕಾರಣವೇನು?' ಗುಂಡಪ್ಪನು ಸೂಕ್ಷ್ಮವಾಗಿ ನಡೆದುದೆಲ್ಲವನ್ನು ವಿವರಿಸಿದನು. ಚಂಡೀದಾಸನು ಆ ಕಥೆಯನ್ನು ಕೇಳಿ ತನ್ನ ಕಿವಿಯನ್ನು ತಾನೇ ನಂಬಲಾರದವನಾದನು. ಕೊನೆಗೆ ಗುಂಡಪ್ಪನು ಇತರ ವಿವರಗಳನ್ನು ನೀಡಿ ಆ ದಿನ ಬೆಳಿಗ್ಗೆ ಜೀಪಿನಲ್ಲಿ ಪ್ರತ್ಯಕ್ಷನಾದ ವ್ಯಕ್ತಿಯೇ ಅಪೆಕ್ಸ್ ಗಾಮಾ ಎಂದು ತಿಳಿಸಿದಾಗ ಅವನಿಗೆ ನಂಬದೆ ಬೇರೆ ದಾರಿಯೇ ಉಳಿಯಲಿಲ್ಲ,

'ಹಾಗಾದರೆ ಈ ದಿನ ಎರಡು ಸಲ ನನ್ನ ಜೀವ ರಕ್ಷಣೆ ಆದ ಹಾಗಾಯಿತು. ಒಮ್ಮೆ ಅನ್ಯಲೋಕ ಜೀವಿಯಿಂದ, ಇನ್ನೊಮ್ಮೆ ಇದೇ ಲೋಕದ ಜೀವಿಯಿಂದ' ಎಂದ ಚಂಡೀದಾಸ.

'ಕದೀಮರಿಂದ ನಮ್ಮಂಥವರು ರಕ್ಷಣೆ ಮಾಡಬಹುದು. ಆದರೆ ದೈವದಿಂದ ರಕ್ಷಣೆ ಮಾಡಿದವನು ಮಾತ್ರ ಅನ್ಯಲೋಕ ಜೀವಿಯೇ!' ಈ ಮಾತಿನ ನಂತರ ಇಬ್ಬರೂ ನಕ್ಷೆಯ ವೀಕ್ಷಣೆಗಾಗಿ ಕುಳಿತರು. ಚಂದರಸನು ನಿಧಿಯನ್ನು ಬಿಟ್ಟು ಹೋಗಿದ್ದಾನೆ ಎಂಬ ವಿಷಯ ಅವರಿಗೆ ಗೊತ್ತಾಯಿತು. ಆದರೆ ನಕ್ಷೆ ಮುಳ್ಳಯ್ಯನ ಗಿರಿಗೆ ಸಂಬಂಧಿಸಿದ್ದು ಎಂಬುದೊಂದನ್ನು ಬಿಟ್ಟು ಹೆಚ್ಚಿನ ಭಾಗ ಅವರಿಗೆ ಅರ್ಥವಾದಂತೆ ತೋರಲಿಲ್ಲ. ಆ ನಕ್ಷೆಯು ಹೆಚ್ಚಾಗಿ ಸಂಜ್ಞೆಗಳಲ್ಲಿಯೇ ಇತ್ತು. ಕೂಡಲೇ ಗುಂಡಪ್ಪನಿಗೆ ನರಸಿಂಹಮೂರ್ತಿಗಳ ನೆನಪಾಯಿತು. ಆತನು 'ನಡೆಯಿರಿ, ನಮ್ಮ ತಂಡದಲ್ಲಿ ನರಸಿಂಹಮೂರ್ತಿಗಳೆಂಬ ವಿದ್ವಾಂಸರಿದ್ದಾರೆ. ಅವರು ಈ ನಕ್ಷೆಯನ್ನು ಖಂಡಿತ ತಿಳಿದುಕೊಳ್ಳುತ್ತಾರೆ' ಎಂದ.

'ಏನು? ಅಪಹೃತರಾದ ನರಸಿಂಹಮೂರ್ತಿಗಳು ನಿಮ್ಮ ತಂಡದಲ್ಲಿದ್ದಾರೆಯೆ?' ಎಂದು ಚಂಡೀದಾಸ ಆಶ್ಚರ್ಯದಿಂದ ಕೇಳಿದ.

'ಹೌದು, ಇದೆಲ್ಲ ಆ ಗಾನೂ ಮಹಾಶಯನ ಕೈವಾಡ.'

'ಹಾಗಾದರೆ ಆ ಕದೀಮರು ನಿಧಿಯನ್ನು ಹುಡುಕಿಕೊಂಡು ಬಂದಿದ್ದರು ಎಂದಂತಾಯಿತು. ನೀವು ಈ ನಕ್ಷೆಯೊಡನೆ ಇಲ್ಲಿಂದ ಮಾಯವಾದರೆ ಅವರು ನಡುರಸ್ತೆಯಲ್ಲಿ—ದಾರಿ ತಪ್ಪಿದ ಕುರುಡರಂತಾಗುತ್ತಾರೆ ನಡೆಯಿರಿ' ಎಂದ ಚಂಡೀದಾಸ. ರಾತ್ರಿ ಸುಮಾರು ಎರಡು ಗಂಟೆಯ ಹೊತ್ತಿಗೆ ಒಂದು ಜೀಪು ಮತ್ತು ಒಂದು ಕಾರು ಚೆಮ್ಮಣ್ಣುಗುಂಡಿಯ ಗಿರಿಧಾಮದಿಂದ ಮುಳ್ಳಯ್ಯನಗಿರಿ ಬೆಟ್ಟದತ್ತ ನಿಧಾನವಾಗಿ ಚಲಿಸತೊಡಗಿದವು.

ಕದೀಮರು ತಮ್ಮ ಕಾಟೇಜನ್ನು ಪ್ರವೇಶಿಸಿದಾಗ ಬೆಳಗಿನ ಜಾವ ಮೂರು ಗಂಟೆಯಾಗಿತ್ತು. ತಮ್ಮ ರೂಮನ್ನು ಶೋಧಿಸಿದ್ದಾರೆಂದು ಅವರಿಗೆ ಕೂಡಲೇ ಗೊತ್ತಾಯಿತು. ನಕ್ಷೆ ಮತ್ತು ಚಂದರಸನ ವಿವರಗಳು ಮಾಯವಾಗಿವೆ ಎಂದು ಜಾರ್ಜ್ ಕೂಡಲೇ ಕಂಡು ಹಿಡಿದ. ಈ ಮಾತನ್ನು ಕೇಳಿ ಕಟ್ಲಾಸ್ ಗಹಗಹಿಸಿ ನಗತೊಡಗಿದ. ನಗುವಿನ ಅಲೆಗಳು ನಿಂತ ಮೇಲೆ ಹೇಳಿದ

ಈ ಕಣ್ಣನ್‌ನ ಕೈಚಳಕ ಇನ್ನೂ ಅವರಿಗೆ ಗೊತ್ತಿಲ್ಲ. ಆ ನಕ್ಷೆ ಮತ್ತು ವಿವರಗಳನ್ನ ಬ್ಲಾಕ್ ಮಾಡಿ ಕಾಪಿ ತೆಗೆದುಕೊಂಡು ಇಟ್ಟುಕೊಂಡಿದ್ದೀನಿ' ಎಂದವನೇ ತನ್ನ ಬೂಟಿನ ಸಾಕ್ಸ್‌ಗಳಿಂದ ಹಲವಾರು ಪ್ರತಿಗಳನ್ನು ಹೊರ ತೆಗೆದು ಜಾರ್ಜ್‌ನ ಮುಂದೆ ಇಟ್ಟ.

೨೪

ಗುಂಡಪ್ಪ ಮತ್ತು ಚಂಡೀದಾಸರು ಮುಳ್ಳಯ್ಯನ ಗಿರಿಯನ್ನು ತಲುಪಿದಾಗ ಬೆಳಗಿನ ನಾಲ್ಕು ಗಂಟೆ ಸಮಯವಾಗಿತ್ತು. ಇಬ್ಬನಿಯು ಅಲ್ಲಲ್ಲಿ ಹರಡಿಕೊಂಡಿದ್ದರೂ ಆ ಎತ್ತರವಾದ ಪ್ರದೇಶದಲ್ಲಿ ಮೋಡಗಳೇ ನೆಲಕ್ಕೆ ಇಳಿದಿದ್ದವು. ತುಂಬಾ ಚಳಿಯಿಂದ ಬಳಲುತ್ತಾ ತಂಡದವರು ಡೇರೆಗಳಲ್ಲಿ ಮಲಗಿದ್ದರು. ಚಂಡೀದಾಸನು ದೂರದಲ್ಲಿ ತನ್ನ ಜೀಪನ್ನು ನಿಲ್ಲಿಸಿ ಕಾಯುತ್ತಿರಬೇಕೆಂದು ತಿಳಿಸಿ ಗುಂಡಪ್ಪನು ತನ್ನ ಕಾರಿನಿಂದಿಳಿದು ಪ್ರಶಾಂತನು ಇದ್ದ ಡೇರೆಯನ್ನು ಸಾವಕಾಶವಾಗಿ ಪ್ರವೇಶಿಸಿದನು. ರೀಟಾ ಮತ್ತು ಪ್ರಶಾಂತ ಗುಂಡಪ್ಪನ ಬರುವನ್ನು ನಿರೀಕ್ಷಿಸುತ್ತಾ ಕುಳಿತಿದ್ದರು. ಗುಂಡಪ್ಪ ಅವರಿಗೆ ಸೂಕ್ಷ್ಮವಾಗಿ ನಡೆದುದೆಲ್ಲವನ್ನೂ ವಿವರಿಸಿದ. ತನ್ನ ಬಳಿಯಿದ್ದ ನಕ್ಷೆಯನ್ನು ಬಿಡಿಸಿ ರೀಟಾಳ ಮುಂದೆ ಇಟ್ಟ. ಮೂವರೂ ನಕ್ಷೆಯನ್ನು ನೋಡುತ್ತಾ ತಲ್ಲೀನರಾದಾಗ ಡೇರೆಯ ಬಾಗಿಲ ಬಳಿ ಚಪ್ಪಾಳೆ ತಟ್ಟಿದ ಸದ್ದಾಯಿತು. ತಿರುಗಿ ನೋಡಿದರೆ ಅಲ್ಲಿ ಮುಗುಳ್ನಗೆ ನಗುತ್ತಾ ಅಪ್ಪೇನ್ಸಗಾಮಾ ನಿಂತಿದ್ದ. ಕೂಡಲೇ ರೀಟಾ ನಕ್ಷೆಯನ್ನು ಮಡಚಿ ತನ್ನ ಹಾಸಿಗೆಯ ಕೆಳಗೆ ಸರಿಸಿದಳು.

'ವೆಲ್ ಡನ್ ಗುಂಡಪ್ಪ. ಅಂತೂ ರಾತ್ರಿ ಇಬ್ಬರ ಪ್ರಾಣವನ್ನು ಉಳಿಸಿಬಿಟ್ಟಿರಿ' ಎಂದ ಗಾಮಾ.

ಗರ ಬಡಿದವನಂತೆ ಕುಳಿತಿದ್ದ ಗುಂಡಪ್ಪ. 'ಆದರೆ ಆ ನಕ್ಷೆಯ ವಿಷಯ ಮಾತ್ರ ನನಗೆ ಗೊತ್ತಿಲ್ಲ. ದೂರದಲ್ಲಿ ನಡೆಯುವುದು ಸ್ಥೂಲದಲ್ಲಿ ಗೊತ್ತಾಗುತ್ತದೆ. ಸೂಕ್ಷ್ಮದಲ್ಲಿ ನಡೆಯುವುದು ಒಮ್ಮೊಮ್ಮೆ ಗೊತ್ತಾಗುವುದಿಲ್ಲ'. ಪ್ರಶಾಂತನು 'ನಿಮ್ಮಿಂದ ಬಚ್ಚಿಡುವುದು ಏನಿದೆ ? ನಕ್ಷೆ ಇಲ್ಲಿಯೇ ಇದೆ ನೋಡಿ' ಎಂದು ರೀಟಾಳ ಹಾಸಿಗೆಯ ಕೆಳಗಿದ್ದ ನಕ್ಷೆಯನ್ನು ತೆಗೆದು

ಗಾಮೂನ ಕೈಗೆ ಇತ್ತ. ಗಾಮೂನು ಅದನ್ನು ಸೂಕ್ಷ್ಮವಾಗಿ ವೀಕ್ಷಿಸಿ 'ಇದನ್ನು ನಮ್ಮ ನರಸಿಂಹಮೂರ್ತಿಗಳೇ ಚೆನ್ನಾಗಿ ತಿಳಿದುಕೊಳ್ಳಬಲ್ಲರು. ಆ ನಿಮ್ಮ ಜೀಪಿನಲ್ಲಿರುವ ಅತಿಥಿಗಳನ್ನು ನನ್ನೊಡನೆಯೇ ಇರುವಂತೆ ಹೇಳಿ', ಎಂದು ಗಾಮೂ ನಕ್ಷೆಯನ್ನು ತೆಗೆದುಕೊಂಡು ತನ್ನ ಡೇರೆಯತ್ತ ನಡೆದ. ಗುಂಡಪ್ಪನು ನಡೆದುದೆಲ್ಲವನ್ನು ವಿವರಿಸಿ ಚಂಡೀದಾಸ ಮತ್ತು ಶಿವಾಜಿಯನ್ನು ತನ್ನ ಡೇರೆಗೆ ಕರೆದುಕೊಂಡು ಬಂದ. ಇಲ್ಲಿ ನಡೆಯುತ್ತಿರುವ ಸಂಗತಿಗಳನ್ನು ಅವರಲ್ಲಿಯೂ ಆಪೇಕ್ಷಿ ಗಾಮೂನ, ಕಾಣಬು ತವಕಿಸುತ್ತಿದ್ದ ಚಂಡೀದಾಸನು ಕೂಡಲೇ ಗುಂಡಪ್ಪನನ್ನು ಹಿಂಬಾಲಿಸಿದನು.

ಗಾಮೂನು ತನ್ನ ಡೇರೆಯಲ್ಲಿ ನಕ್ಷೆಯನ್ನು ನರಸಿಂಹಮೂರ್ತಿಗಳ ಎದುರು ಬಿಚ್ಚಿ ಇಟ್ಟನು. ಮೂರ್ತಿಗಳು ನಕ್ಷೆಯನ್ನು ಮೊದಮೊದಲು ಉಪೇಕ್ಷೆಯಿಂದ ಕಂಡರು. ನಂತರ ಚಂದರಸನಿಗೆ ಸಂಬಂಧಿಸಿದ ದಾಖಲೆಗಳನ್ನು ಪರೀಕ್ಷಿಸುತ್ತಿದ್ದಂತೆ ಅವರ ಮುಖವು ಗಂಭೀರವಾಗ ತೊಡಗಿತು. ಚಂದರಸ ನನ್ನು ತಾವು ಕಂಡವರು ಎಂಬಂತೆ 'ಇದು ಅವನಿಗೇ ಸಂಬಂಧಿಸಿದ್ದು' ಎಂದು ಮತ್ತೆ ನಕ್ಷೆಯನ್ನು ಪರೀಕ್ಷಿಸತೊಡಗಿದರು ಯಾವುದರಲ್ಲೂ ಹೆಚ್ಚಿನ ಆಸ್ಥೆಯನ್ನು ವಹಿಸಿರದಿದ್ದ ನರಸಿಂಹಮೂರ್ತಿಗಳು ಒಮ್ಮೆಲೇ ಚಂದರಸನ ಈ ದಾಖಲೆಯಲ್ಲಿ ಇಷ್ಟು ಆಸಕ್ತಿಯನ್ನು ತೋರಿದ್ದು ಗಾಮೂ ಮತ್ತು ಸರಸ್ವತಿಗೆ ಆಶ್ಚರ್ಯವನ್ನುಂಟುಮಾಡಿತು.

ನಕ್ಷೆಯನ್ನು ಪರೀಕ್ಷಿಸಿದ ನಂತರ ನರಸಿಂಹಮೂರ್ತಿಗಳು ಹೇಳಿದರು, 'ನಾವು ಆ ಸ್ಥಳಕ್ಕೆ ಸಮೀಪದಲ್ಲೇ ಇದ್ದೇವೆ ಇಲ್ಲಿ ಎಲ್ಲಿಯೋ ಒಂದು ಆಲದ ಮರ ಇರಬೇಕು'. ಅವರ ಮಾತಿನ ಅರ್ಥವು ಗಾಮೂ ಮತ್ತು ಸರಸ್ವತಿಗೆ ತಿಳಿಯಲಿಲ್ಲ.

'ನಿಮ್ಮ ಮಾತನ್ನು ದಯವಿಟ್ಟು ಬಿಡಿಸಿ ಹೇಳಬೇಕು' ಎಂದಳು ಸರಸ್ವತಿ.

ನರಸಿಂಹಮೂರ್ತಿಗಳು ಉತ್ಸಾಹ ತುಂಬಿದ ಮೂರ್ತಿಗಳಾಗಿ ಹೇಳ ತೊಡಗಿದರು, 'ಚಂದರಸನನ್ನು ಕುರಿತು ನಾನು ಈ ಹಿಂದೆ ಬಹಳವಾಗಿ ಅಭ್ಯಾಸಮಾಡಿದ್ದೇನೆ. ಆತನೊಬ್ಬ ಜೈನ ಮಹಾರಾಜನಾಗಿದ್ದ. ಇಲ್ಲಿಯ ಸುತ್ತಮುತ್ತಲಿನ ಪ್ರದೇಶವೆಲ್ಲಾ ಹಿಂದೆ ಆತನ ಆಡಳಿತಕ್ಕೇ ಒಳಪಟ್ಟಿತ್ತು.

ಆತನ ಪಾಳೆಯಗಾರರಲ್ಲಿ ಒಬ್ಬರಾಗಿದ್ದ ತಿಮ್ಮಾಭಟ್ಟನೆಂಬ ಬ್ರಾಹ್ಮಣನಿಗೂ ಚಂದರಸರಿಗೂ ವೈಮನಸ್ಸು ಪ್ರಾಪ್ತವಾಗಿ ಯುದ್ಧವೇ ನಡೆಯಿತು. ತಿಮ್ಮಾ ಭಟ್ಟನ ಕುಟಿಲ, ಕುತಂತ್ರ ಯೋಜನೆಗಳಿಂದಾಗಿ ಪಾಳೆಯಗಾರರೆಲ್ಲ ಒಂದಾಗಿ ಚಂದರಸನನ್ನು ಸದೆಬಡಿದರು. ಚಂದರಸನು ಸೋತನಂತರ ಈ ಮುಳ್ಳಯ್ಯನ ಗಿರಿಯ ಬಳಿಯ ಗುಹೆಯೊಂದರಲ್ಲಿ ತನ್ನ ನಿಧಿಯೊಂದಿಗೆ ವಾಸವಾಗಿದ್ದನೆಂದು ತಿಮ್ಮಾಭಟ್ಟನಿಗೆ ಸೇರಿದ ದಾಖಲೆಗಳೂ ಹೇಳುತ್ತವೆ. ಈಗ ದೊರೆತಿರುವ ಈ ದಾಖಲೆಯಿಂದ ತಿಮ್ಮಾಭಟ್ಟರ ದಾಖಲೆಗಳು ಸರಿ ಎಂದು ಸಿದ್ಧವಾದ ಹಾಗಾ ಯಿತು '. ಕುತೂಹಲದಿಂದ ಈ ಮಾತನ್ನು ಗಾಮಾ, ಸರಸ್ವತಿ ಮಾತ್ರವಲ್ಲ, ಆ ಡೇರೆಯ ಹಿಂಬದಿಗೆ ಅಡಗಿದ್ದ ರೀಟಾ ಕೂಡ ಕೇಳುತ್ತಿದ್ದಳು. ಆದರೆ ತಿಮ್ಮಾಭಟ್ಟನ ದಾಖಲೆಗಳು ನರಸಿಂಹಮೂರ್ತಿಗಳ ಕೈಯನ್ನು ಹೇಗೆ ಸೇರಿದುವು ಎಂಬ ಪ್ರಶ್ನೆ ಮಾತ್ರ ಗಾಮಾ ಮತ್ತು ಸರಸ್ವತಿಯಲ್ಲಿ ಹುಟ್ಟಲೇ ಇಲ್ಲ. ಏಕೆಂದರೆ ಹೊಸ ವಿಷಯದಿಂದ ಅವರು ಹೆಚ್ಚು ಕುತೂಹಲಿಗಳೂ, ಉತ್ಸಾಹಿಗಳೂ ಆಗಿದ್ದರು. ರೀಟಾ ಈ ಮಹತ್ವದ ಸುದ್ದಿಯನ್ನು ತಿಳಿದು ಕೊಂಡು ತನ್ನ ಡೇರೆಯತ್ತ ನಡೆದಳು. ಆದರೆ ನರಸಿಂಹಮೂರ್ತಿಗಳು ತಮ್ಮ ಮಾತನ್ನು ಮುಂದುವರಿಸುತ್ತ ಹೇಳಿದರು. ' ತಿಮ್ಮಾಭಟ್ಟನ ದಾಖಲೆಗಳ ಪ್ರಕಾರ ಚಂದರಸನು ಮುಂದೆ ತಪಸ್ಸಿನಲ್ಲಿ ತೊಡಗಿ ಬಹುದೊಡ್ಡ ಜ್ಞಾನಿ ಯಾದನೆಂದು ಪ್ರತೀತಿ ಇತ್ತಂತೆ. ಈಗ ನಕ್ಷೆಯ ಪ್ರಕಾರ ನಾವು ಪುರಾತನ ವಾದ ಆ ಆಲದ ಮರವನ್ನು ಕಂಡುಹಿಡಿಯಬೇಕು '.

' ಅಂದರೆ ಆಲದ ಮರದ ಬಳಿ ಆ ಗುಹೆ ಇರಬಹುದೆ ' ? ಎಂದು ಸರಸ್ವತಿಯು ಪ್ರಶ್ನಿಸಿದಳು.

' ಹಾಗೆ ಹೇಳಲು ಬರುವುದಿಲ್ಲ. ಮೊದಲು ಆಲದ ಮರವನ್ನಂತು ಕಂಡು ಹಿಡಿಯಬೇಕು '. ಎಂದು ಚುಟುಕಾಗಿ ಉತ್ತರಿಸಿ ನರಸಿಂಹ ಮೂರ್ತಿಗಳು ಡೇರೆಯಿಂದ ಹೊರನಡೆದರು. ಸರಸ್ವತಿಯು ತದೇಕ ಚಿತ್ತದಿಂದ ನಕ್ಷೆಯನ್ನು ವೀಕ್ಷಿಸುತ್ತ ಕುಳಿತರೆ ಗಾಮಾನು ಯಾವುದೋ ಚಿಂತೆಯಲ್ಲಿ ಮುಳುಗಿದವನಂತೆ ಕುಳಿತ. ' ಚಂದರಸನ ಗುಹೆಯನ್ನು ಪತ್ತೆ ಹಚ್ಚಿದರೆ ನನಗೆ ಬೇಕಾದ ವಿವರಗಳು ಮತ್ತು ಜ್ಞಾನ ಸಹಜವಾಗಿ ದೊರೆಯಬಹುದು ', ಂದಗಾ ಮಾ.

ಅವನ ಪ್ರಶ್ನೆಯನ್ನು ಲಕ್ಷಿಸದೆ ಸರಸ್ವತಿಯು ಹೇಳಿದಳು: 'ನರಸಿಂಹ ಮೂರ್ತಿಗಳು ನಮ್ಮಿಂದ ಏನನ್ನೋ ಬಚ್ಚಿಡುತ್ತಿದ್ದಾರೆ. ಈ ನಕ್ಷೆಯಲ್ಲಿ ಉಪಯೋಗಿಸಿದ ಸಂಜ್ಞೆಗಳ ಪ್ರಕಾರ ಆಲದಮರದ ನೆರಳು ಸಾಯಂಕಾಲ ಎಲ್ಲಿ ಬೀಳುತ್ತದೋ ಅಲ್ಲಿ ಚಂದರಸನ ಗುಹೆಯ ಮೂಲ ಇರುವ ಸಾಧ್ಯತೆಗಳಿವೆ.'

'ಹೌದೇ? ಇರಲಿ. ಈ ವಿಷಯ ನಮಗೆ ಗೊತ್ತಿದೆ ಎಂಬುದನ್ನು ಮಾತ್ರ ನರಸಿಂಹಮೂರ್ತಿಗಳು ಅರಿಯಬಾರದು' ಎಂದ ಗಾಮಾ.

ಗುರು, ಶಾಂತಲಾ ಮತ್ತು ವೀರೇಂದ್ರರು ರಾತ್ರಿಯನ್ನು ಆ ಗಿರಿಯ ಚಳಿಯಲ್ಲಿ ಸುಗಮವಾಗಿ ಕಳೆದರೆಂದು ಭಾವಿಸಬೇಕಿಲ್ಲ. ಗಾಮಾನನ್ನು ಮರಳಿ ತಮ್ಮ ಲೋಕಕ್ಕೆ ಕರೆದೊಯ್ಯದಿದ್ದರೆ ಆಗುವ ಹಾನಿಯ ಅರಿವು ಆ ಮೂವರಿಗೂ ಇತ್ತು. ಗಾಮಾನು ಭೂಲೋಕದ ಜೀವಿಗಳೊಡನೆ ಬೆರೆತದ್ದನ್ನು ಕಂಡೂ ಕೂಡ ತಾವು ನಿರುಪಾಯರಾಗಿ ಮರಳಿದರೆ ಭೂಲೋಕದ ಜನರ ಆಧಿಪತ್ಯವನ್ನು ಒಪ್ಪಿಕೊಂಡಂತೆಯೇ. ಆದರೆ ಈ ವಿಷಯಕ್ಕೆ ತಮ್ಮದೇ ಆದ ಮನುಷ್ಯನೊಬ್ಬನು ಕಾರಣನಾಗಿದ್ದಾನೆ ಎನ್ನುವ ವಿಷಯವೇ ಅವರಿಗೆ ಕೈಕೈ ಹಿಚುಕಿಕೊಳ್ಳುವಂತೆ ಮಾಡಿತ್ತು. ಮೇಲಾಗಿ ಅವರ ವಿಫಲತೆಯು ಅವರ ಲೋಕದಲ್ಲಿ ಅವರ ಸ್ಥಾನವನ್ನು ಕೇವಲ ಗುಲಾಮರ ಸ್ಥಾನಕ್ಕೆ ಇಳಿಸುವಂತೆ ಮಾಡಬಹುದಾಗಿತ್ತು. ಹಾಗಾದರೆ ಅವರಿಗಿದ್ದ ಹೆಚ್ಚಿನ ಅತಿಮಾನುಷ ಶಕ್ತಿಗಳನ್ನೆಲ್ಲ ಕಿತ್ತುಕೊಂಡು ಬಿಡಲಾಗುತ್ತಿತ್ತು. ಈ ಹೆದರಿಕೆಯಿಂದ ಅವರು ತಮ್ಮ ಲೋಕದೊಡನೆ ರಾತ್ರಿಯೇ ಸಂಬಂಧವನ್ನು ಸ್ಥಾಪಿಸಿಕೊಂಡು ತಮ್ಮ ಮುಂದಿನ ಕಾರ್ಯಕ್ಕಾಗಿ ಸೂಕ್ತ ಸಲಹೆಗಳನ್ನು ಪಡೆದಿದ್ದರು. ಸಹಾಯವನ್ನು ಕೋರಿ ಅವರು ಮಾಡಿಕೊಂಡಿದ್ದ ಮೊರೆಯನ್ನು 'ಲೋಕ ಕರ್ತೃ'ಗಳ ನಾಯಕನು ಬಹಳ ಸಾವಧಾನದಿಂದ ಕೇಳಿ ಪರಿಶೀಲಿಸಿದನು. ನಂತರ ಸಹಾಯವನ್ನು ಕಳುಹಿಸುವುದಾಗಿ ಚುಟುಕಾಗಿ ಉತ್ತರಿಸಿದನು. ಇದರಿಂದ ಮೂವರಿಗೂ ಹರ್ಷವಾದರೂ ಕೂಡ ಎಂಥ ಸಹಾಯ ಎಂಬುದು ವ್ಯುತೆ

ತಿಳಿಯಲಾಗದೆ ಹೋಯಿತು. ಆ ಲೋಕದಿಂದ ಈ ಭೂಮಿಗೆ ಸಹಾಯವು ಬೆಳಕಿನ ವೇಗದಲ್ಲಿ ಬಂದರೂ ಮೂರುದಿನಕ್ಕಿಂತ ಕಡಿಮೆಯ ಅವಧಿಯಲ್ಲಿ ಇಲ್ಲಿಗೆ ಬರುವ ಸಾಧ್ಯತೆಯೇ ಇರಲಿಲ್ಲ. ಆದರೆ ಗ್ರಾಮಾನನ್ನು ಹುಡುಕುವ ತಮ್ಮ ಮೇಲಿನ ಜವಾಬ್ದಾರಿಯು ಈಗ ' ಲೋಕಕರ್ತೃ ' ನಾಯಕನ ಮೇಲೆ ಇವೆ ಎಂಬ ಸಮಾಧಾನವು ಆ ಮೂವರಲ್ಲೂ ಇತ್ತು.

ಮರುದಿನ ಬೆಳಿಗ್ಗೆ ಆ ಮೂವರೂ ಹೆಚ್ಚಿನ ಸಮಾಲೋಚನೆಯಲ್ಲಿ ತೊಡಗಿದಾಗ ದೂರದರ್ಶಕದ ಮೂಲಕ ವೀರೇಂದ್ರನು ಗ್ರಾಮಾನ ಡೇರೆಯ ಸುತ್ತಮುತ್ತ ನಡೆಯುತ್ತಿದ್ದ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ವೀಕ್ಷಿಸುತ್ತಿದ್ದ. ಆದರೆ ಅಲ್ಲಿ ನಕ್ಷೆಯು ವಿಚಾರವಾಗಿ ನಡೆಯುತ್ತಿದ್ದ ಜಿಜ್ಞಾಸೆಯ ಸುಳಿವು ಮಾತ್ರ ಅವರಿಗೆ ಇರಲಿಲ್ಲ. ಆದರೆ ಇದ್ದಕ್ಕಿದ್ದಂತೆ ಗ್ರಾಮಾನ ತಂಡದವರು ಹೊರಬಿದ್ದು ಆ ಕೊಳ್ಳ ಬೆಟ್ಟಗಳನ್ನು ಶೋಧಿಸಲು ಹೊರಟಿರುವುದನ್ನು ವೀರೇಂದ್ರನು ಗಮನಿಸಿದ. ವೀರೇಂದ್ರ ಕೂಡಲೇ ಈ ಸಂಗತಿಯನ್ನು ಇತರ ಇಬ್ಬರಿಗೂ ತಿಳಿಸಿದ. ಆಗ ಆ ಮೂವರೂ ಪ್ರಯಾಣದ ಸಿದ್ಧತೆಗಳನ್ನು ಮಾಡಿಕೊಂಡು ಬೆಟ್ಟಗಳನ್ನು ಏರಲು ಬೇಕಾಗುವ ಸಲಕರಣೆಗಳನ್ನು ಸಿದ್ಧಪಡಿಸಿಕೊಂಡು ಗ್ರಾಮಾನ ಡೇರೆಯ ಮೇಲ್ಭಾಗದಲ್ಲಿ ಮುಳ್ಳಯ್ಯನ ಗಿರಿಗೆ ಸಮಾನಾಂತರವಾಗಿರುವ ಕಬ್ಬಿಣದ ಬೆಟ್ಟದತ್ತ ನಡೆದರು. ಅಲ್ಲಿಂದ ಅವರು ಗ್ರಾಮಾನ ತಂಡದವರ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ನೋಡಬಹುದಾಗಿತ್ತು. ಆದರೆ ಕಬ್ಬಿಣದ ಬೆಟ್ಟದ ತುದಿಯನ್ನು ಸೇರುವ ದಾರಿಯು ಬಹು ದುರ್ಗಮವೂ ಕಠಿಣವೂ ಆಗಿತ್ತು. ಆ ದಾರಿಯನ್ನು ಅವರು ಬೆಳಕಿನ ರೂಪದಲ್ಲಿಯೇ ಕ್ರಮಿಸಬಹುದಾಗಿತ್ತು. ಆದರೆ ಸರಿಯಾದ ದಾರಿ ಇಲ್ಲದ್ದರಿಂದ ಆ ಗಿರಿಕಂದರದಲ್ಲಿ ಅದೃಶ್ಯರೂಪದಲ್ಲಿ ಅವರು ಚಲಿಸುತ್ತಿರುವಾಗ ಗಿಡಗಂಟೆಗಳು ಸುಮ್ಮನೆ ಸರಿದಾಡಿದಂತೆ ಭಾಸವಾಗಬಹುದಿತ್ತು. ಇದರಿಂದ ದೂರದಿಂದ ನೋಡುತ್ತಿರುವ ಯಾರಿಗಾದರೂ ಸಂಶಯ ಬರುತ್ತಿತ್ತು. ಹೀಗಾಗಿ ಮನುಷ್ಯ ರೂಪದಲ್ಲಿಯೇ ಅವರು ಪ್ರಯಾಣ ಬೆಳೆಸಲು ಉಪಕ್ರಮಿಸಿದರು.

ಗ್ರಾಮಾನ ತಂಡದವರು ಆ ಗಿರಿಕಂದರಗಳನ್ನು ಶೋಧಿಸಲು ಪ್ರಾರಂಭಿಸಿದಾಗಲೇ ಸರಸ್ವತಿಯ ಮನಸ್ಸಿನಲ್ಲಿ ಒಂದು ಸಂಶಯವು ಹೆಡೆ

ಎತ್ತಿತು. ಸಸ್ಯಶಾಸ್ತ್ರದ ಪ್ರಕಾರ ಇಂಥ ಎತ್ತರವಾದ ಪ್ರದೇಶದಲ್ಲಿ ಆಲದ ಮರಗಳು ಇರುವುದು ಬಹಳ ವಿರಳ ಎಂದು ಅವಳ ಮನಸ್ಸು ಹೇಳುತ್ತಿತ್ತು. ಆದರೆ ನಕ್ಷೆಯಲ್ಲಿಯ ಹಲವಾರು ಸಂಗತಿಗಳಂತೆ ಇದೂ ಕೂಡ ನಿಗೂಢ ವಿಷಯವೇ ಎಂದು ಅಂದುಕೊಂಡಳು.

ಕಣ್ಣನ್ ನಕ್ಷೆಯನ್ನು ಓದುವುದರಲ್ಲಿ ನಿಷ್ಣಾತನೇನೂ ಆಗಿರಲಿಲ್ಲ. ಆದರೆ ಇಂಥ ಹಲವಾರು ನಕ್ಷೆಗಳ ಚಿತ್ರ ಮತ್ತು ಫೋಟೋಗಳನ್ನು ಆತನು ನೋಡಿದ್ದ. ಹಿಂದೆ ಕೆಲವು ವರುಷ ಆತನು ಮದ್ರಾಸ್ ಯೂನಿವರ್ಸಿಟಿಯ ಪುರಾತತ್ವ ವಿಭಾಗದಲ್ಲಿ ಫೋಟೋಗ್ರಾಫರ್ ಎಂದು ಕೆಲಸ ಮಾಡಿದ್ದ. ಹೀಗಾಗಿ ಆತನು ನಕ್ಷೆಯಲ್ಲಿಯ ಮುಳ್ಳಯ್ಯನ ಗಿರಿಯನ್ನು ಗುರುತಿಸಲು ಸಮರ್ಥನಾಗಿದ್ದ. ಆ ದಿನ ಬೆಳಿಗ್ಗೆ ಗಿರಿಯನ್ನು ಸಮೀಪಿಸಿದೊಡನೆ ನಕ್ಷೆಯಲ್ಲಿಯ ಕಬ್ಬಿಣದ ಬೆಟ್ಟವನ್ನು ಆತ ಕಂಡುಹಿಡಿದ. ಆದರೆ ಆಲದ ಮರದ ಸಂಜ್ಞೆ ಮಾತ್ರ ಆತನಿಗೆ ಅರ್ಥವಾಗಿರಲಿಲ್ಲ. ಹೀಗಾಗಿ ಗಾಮಾನ ತಂಡದವರನ್ನು ಬಿಟ್ಟು ಉಳಿದೆರಡು ತಂಡಗಳಿಗೆ ಆಲದ ಮರದ ಸಂಜ್ಞೆಯ ವಿಷಯ ಗೊತ್ತಾಗಲಿಲ್ಲ. ಕಬ್ಬಿಣದ ಬೆಟ್ಟದ ನಂತರ ಬರುವ ಬೆಟ್ಟವನ್ನು ಕದೀಮರ ತಂಡವೂ ತನ್ನ ಶೋಧನೆಗಾಗಿ ಆರಿಸಿಕೊಂಡಿತು. ಅವರ ಮುಖ್ಯ ಉದ್ದೇಶವು ಇರಬಹುದಾದ ಗುಹೆಗಳನ್ನು ಪರೀಕ್ಷಿಸುವುದೇ ಆಗಿತ್ತು. ಗಾಮಾನ ತಂಡದವರನ್ನು ಮೊದಮೊದಲು ಕದೀಮರ ತಂಡ ನೋಡಲೇ ಇಲ್ಲ. ಆದರೆ ಮಧ್ಯಾಹ್ನದ ವೇಳೆಗೆ ಕಬ್ಬಿಣದ ಬೆಟ್ಟದ ಕೆಳಭಾಗದಲ್ಲಿ ಸೊಂಟಕ್ಕೆ ಹಗ್ಗಗಳನ್ನು ಕಟ್ಟಿಕೊಂಡು ಸುಮಾರು ಎಂಟು ಆಕೃತಿಗಳು ಏರುತ್ತಿರುವುದನ್ನು ಜಾರ್ಜ್ ದೂರದಿಂದ ಕಂಡ. ಕೂಡಲೇ ದೂರದರ್ಶಕದ ಮೂಲಕ ಆತನು ಆ ತಂಡವನ್ನು ವೀಕ್ಷಿಸಿದ. ಆ ತಂಡದಲ್ಲಿ ಚಂಡೀದಾಸ, ಶಿವಾಜಿ ಮತ್ತು ಗುಂಡಪ್ಪನನ್ನು ಕದೀಮರು ಸ್ಪಷ್ಟವಾಗಿ ಗುರುತಿಸಿದರು. ಉಳಿದವರು ಯಾರಿರಬಹುದೆಂದು ಅವರಿಗೆ ಅರ್ಥವಾಗಲಿಲ್ಲ. ಆದರೆ ಚಂಡೀದಾಸನ ಕೈಗೆ ತಮ್ಮ ನಕ್ಷೆಯು ದೊರತಿರುವುದರಿಂದ ಆತನು ತಮ್ಮಂತೆಯೇ ನಿಧಿಗಾಗಿ ಒಂದು ತಂಡವನ್ನೇ ಕಟ್ಟಿಕೊಂಡು ಹೊರಟಿದ್ದಾನೆಂದು ಅವರು ಭಾವಿಸಿದರು. ಹೀಗಾಗಿ ಆ ತಂಡವನ್ನು ಬೆನ್ನಟ್ಟಿ ನಿಜವಾದ ಗುಹೆಯನ್ನು ಅವರು ಕಂಡು ಹಿಡಿದೊಡನೆ ಆ ತಂಡವನ್ನು ಮುಗಿಸಿ ನಿಧಿಯನ್ನು ಹಾರಿಸಿಕೊಂಡು ಹೋಗ

ಬೇಕೆಂದು ಅವರು ಲೆಕ್ಕ ಹಾಕಿದರು. ಚಂಡೀದಾಸನನ್ನು ಕಂಡೊಡನೆ ಸಿಂಗನಂತೂ '.ನಿಧಿ ಸಿಕ್ಕಿ ಬಿಡ್ಲಿ ನನಗೆ ಚಾಕು ಹೊಡೆದವನನ್ನು ಮತ್ತು ಚಂಡೀದಾಸನನ್ನು ಮುಗಿಸಲು ಸರಿಯಾದ ಮಾರ್ಗ ಸಿಕ್ಕಿದೆ' ಎಂದ.

ಈ ರೀತಿಯಾಗಿ ಯೋಚಿಸಿಕೊಂಡು ಅವರು ಚಿಕ್ಕ ಬೆಟ್ಟದಿಂದ ಕಬ್ಬಿಣದ ಬೆಟ್ಟದ ಕಡೆಗೆ ಹೊರಡಲು ಅನುವಾದರು. ಹತ್ತು ಹೆಜ್ಜೆ ಹೋಗುವುದ ರೊಳಗಾಗಿ ತಮ್ಮ ಬೆಟ್ಟದ ಕೊಳ್ಳದ ಕೆಳಭಾಗದಲ್ಲಿ ಆಕೃತಿಯೊಂದು ಚಲಿಸು ತ್ತಿರುವುದನ್ನು ಅವರು ಕಂಡರು. ದೂರದರ್ಶಕದಿಂದ ನೋಡಿದಾಗ ಆ ಆಕೃತಿಯು ಜಟಾಜೂಟ ಧಾರಿಯಾಗಿದ್ದ ಒರ್ರೀ ಲಂಗೋಟಿಯು ಮೇಲಿದ್ದ ಸನ್ಯಾಸಿಯೆಂದು ಕಂಡುಬಂದಿತು. ಆ ಸನ್ಯಾಸಿಯು ಮಣ್ಣಿನ ಮಡಕೆಯಲ್ಲಿ ಕಲ್ಲಿನಿಂದ ಒಸರುತ್ತಿದ್ದ ನೀರನ್ನು ತುಂಬಿಕೊಂಡು ದಾರಿಯಿಲ್ಲದ ದಾರಿಯತ್ತ ನಡೆದನು.

'ಅವನನ್ನು ಹಿಂಬಾಲಿಸಿದರೆ ನಾವು ಹುಡುಕುವ ಗುಹೆ ನಮಗೆ ಸಿಗಬಹುದು' ಎಂದ ಜಾರ್ಜ್.

'ಆ ಬತ್ತಲೇ ಫಕೀರನನ್ನು ಹಿಂಬಾಲಿಸುವ ಬದಲು ಆ ಚಂಡೀದಾಸ ಮತ್ತು ಇತರ ಕ್ರಿಮಿಗಳು ಏರುತ್ತಿರುವ ಹಗ್ಗವನ್ನು ಕತ್ತರಿಸಿ ಮೊದಲು ಅವರನ್ನು ಮುಗಿಸಬೇಕು' ಎಂದ ನಿಂಗ.

'ಸಾಕು ಸುಮ್ಮನಿರು. ಆ ಸನ್ಯಾಸಿಯೇ ನಿಧಿಯೆಂದು ತಿಳಿ. ಚಂಡೀ ದಾಸ ಇದ್ದರೆಷ್ಟು? ಸತ್ತರೆಷ್ಟು? ನಮಗೆ ಬೇಕಾಗಿರುವುದು ಚಂದರಸನ ನಿಧಿ ಮಾತ್ರ' ಎಂದ ಕಣ್ಣನ್.

'ಹೌದು ನಿಂಗ, ಈಗ ಇಲ್ಲದ ತಲೆ ಹರಟೆಮಾಡಿ ನಿನ್ನ ಹುಂಬ ಬುದ್ಧಿ ಯನ್ನು ಪ್ರದರ್ಶಿಸಬೇಡ' ಎಂದು ಜಾರ್ಜ್ ಸಾಮಾನುಗಳನ್ನು ಎತ್ತಿಕೊಂಡು ಮುನ್ನಡೆದ. ಉಳಿದ ಇಬ್ಬರು ಆತನನ್ನು ಹಿಂಬಾಲಿಸಿದರು.

ಬೈರಾಗಿಯಂತೆ ಕಾಣುತ್ತಿದ್ದ ಆ ಸನ್ಯಾಸಿಯು ಪೊದೆಗಳ ನಡುವೆ ನುಸುಳಿ ಮಾಯವಾದನು. ಮೂವರೂ ಕದೀಮರಿಗೆ ಇಂಥ ಬೆಟ್ಟ ಕಾಡು ಗಳಲ್ಲಿ ಓಡಾಡಿ ಅನುಭವವಿರಲಿಲ್ಲ ಹೀಗಾಗಿ ಆ ಕಂದರದಲ್ಲಿ ಇಳಿಯಲು ಅವರಿಗೆ ಸ್ವಲ್ಪ ವೇಳೆ ಹಿಡಿಯಿತು. ಪೂರ್ತಿಯಾಗಿ ಕೆಳಗಿಳಿದ ಮೇಲೆ ಜುಳು ಜುಳು ಎಂದು ಹರಿಯುತ್ತಿರುವ ನೀರಿನ ಶಬ್ದ ಕೇಳತೊಡಗಿತು. ಆ ನೀರು

ಬಂಡೆಗಳಿಂದ ವಸರುತ್ತಿದ್ದ ನೀರು. ಕೆಳಗೆ ಹರಿದು ಒಂದು ತೊರೆಯಾಗಿತ್ತು. ಅದರ ಅಕ್ಕಪಕ್ಕದಲ್ಲಿ ಏಲಕ್ಕಿಯ ವಾಸನೆಯು ಮೂಗಿಗೆ ಘಂ ಎಂದು ಹೊಡೆಯಿತು ಯಾರ ಸಹಾಯವೂ ಇಲ್ಲದೆ ನಿಸರ್ಗದ ಆ ರಮಣೀಯ ದೃಶ್ಯದಲ್ಲಿ ಏಲಕ್ಕಿಯು ತಾನೇ ತಾನಾಗಿ ಬೆಳೆದಿತ್ತು. ಅಲ್ಲಿ ಹರಿಯುತ್ತಿದ್ದ ಆ ತಿಳಿನೀರು ಮಂಜುಗಡ್ಡೆಯ ಮೇಲೆ ಹರಿದು ಬಂದ ನೀರಿನಂತೆ ತಣ್ಣಗೆ ಕೊರೆಯುತ್ತಿತ್ತು. ಬಹಳ ಕರಾಳ ಜೀವನವನ್ನು ಸಾಗಿಸಿದ್ದ ಮೂವರೂ ಕದೀಮರಿಗೆ ಈ ತಂಪು ಪ್ರದೇಶ ಜೀವನದಲ್ಲಿ ಪ್ರಥಮ ಬಾರಿಗೆ ಶಾಂತಿಯ ಮಹತ್ವವನ್ನು ತೋರಿಸಿ ಕೊಟ್ಟಿತ್ತು. ಅಚೆ ಈಚೆ ನೋಡುತ್ತಿರುವಂತೆ ತೊರೆಯಿಂದ ಅನತಿ ದೂರದಲ್ಲಿ ಪೊದೆಗಳು ಅಲುಗಾಡುತ್ತಿರುವುದು ಕಂಡುಬಂದಿತು. ಆ ಬೈರಾಗಿಯು ಅಲ್ಲಿಯೇ ಎಲ್ಲಿಯೋ ಇದ್ದಾನೆಂದು ಆ ಮೂವರೂ ಅತ್ತಕಡೆ ಧಾವಿಸಿದರು. ಇವರು ಆ ಸ್ಥಳವನ್ನು ತಲುಪಿ ನೋದುವಷ್ಟರಲ್ಲಿ ಅಲ್ಲಿ ಬುಸ್ ಬುಸ್ ಎಂದು ಶಬ್ದವು ಬರತೊಡಗಿತು. ಒಂದು ಬಹು ದೊಡ್ಡ ಬೃಹದಾಕಾರದ ಹೆಬ್ಬಾವನ್ನು ನಿಂಗನು ಮೊದಲು ಗುರುತಿಸಿದನು. ಆ ಹಾವು ಸುರಳಿಯನ್ನು ಸುತ್ತುತ್ತ ಒಂದು ಸಿಂಬಿಯಾಕಾರದಲ್ಲಿ ಚಲನೆ ಇಲ್ಲದೇ ಬಿದ್ದುಕೊಂಡಿತು. ಒಂದು ಪೊದೆಯ ಹಿಂಬದಿಯಿಂದ ಸನ್ಯಾಸಿಯು ಬಂದು ಆ ಹಾವನ್ನು ತನ್ನ ದಿಂಬಂತೆ ಉಪಯೋಗಿಸಿಕೊಂಡು ಅದರ ಮೇಲೆ ತಲೆಯಿಟ್ಟು ಮಲಗಿದನು. ಈ ದೃಶ್ಯವನ್ನು ನೋಡುತ್ತಿದ್ದ ಕದೀಮರಿಗೆ ಆಶ್ಚರ್ಯವಾಯಿತು. ನಿರಾಯುಧನಾಗಿ ಮಲಗಿದ್ದ ಆ ಸನ್ಯಾಸಿಯನ್ನು ಕೊಲ್ಲುವುದು ಪ್ರಯಾಸದ ಕೆಲಸವಾಗಿರಲಿಲ್ಲ. ಆದರೆ ಆತನಿಂದ ಚಂದರಸನ ಮಾಹಿತಿಯನ್ನು ಪಡೆಯಬೇಕಾಗಿತ್ತು. ಇದಲ್ಲದೆ ಆ ಹೆಬ್ಬಾವು ಏನು ಮಾಡುತ್ತದೋ ಎಂಬ ಭಯವೂ ಮೂವರನ್ನು ಕಾಡುತ್ತಿತ್ತು. ಆದರೂ ನಿಂಗನು ತನ್ನ ಕೈಯಲ್ಲಿ ಚಾಕುವನ್ನು ಹಿಡಿದು ನಿಧಾನವಾಗಿ ಇವರಿಗೆ ಬೆನ್ನು ಹಾಕಿ ಮಲಗಿದ್ದ ಸನ್ಯಾಸಿಯತ್ತ ನಡೆದನು. ನಿಂಗನು ಅವನನ್ನು ತಟ್ಟಿದೊಡನೆ ಸನ್ಯಾಸಿಯು ನಿಧಾನಕ್ಕೆ ನಿಂಗನತ್ತ ತಿರುಗಿದನು. ಆತನ ಮುಖವು ಮುಗ್ಧವಾಗಿದ್ದು ಕಣ್ಣುಗಳು ಕಾಂತಿಯಿಂದ ಹೊಳೆಯುತ್ತಿದ್ದವು. ಆತನು ನಿಂಗನತ್ತ ಯಾವ ವಿಕಾರವೂ ಇಲ್ಲದೇ ನೋಡುತ್ತಿದ್ದನು. ಆದರೆ ಏನೂ ಮಾತನಾಡಲಿಲ್ಲ. ಈ ವೇಳೆಗೆ ಜಾರ್ಜ್ ಮತ್ತು ಕಣ್ಣನ್ ಕೂಡ ನಿಂಗನ ಹಿಂಭಾಗದಲ್ಲಿ ಬಂದು ನಿಂತುಕೊಂಡಿದ್ದರು.

ಸನ್ಯಾಸಿಯು ಮೌನವಾಗಿರುವುದನ್ನು ಕಂಡು ಜಾರ್ಜನು ಕೇಳಿದನು, ' ಇಲ್ಲಿ ಎಲ್ಲಿಯಾದರೂ ಗುಹೆಗಳು ಇವೆಯಾ ' ? ಇಲ್ಲವೆಂದು ಸನ್ಯಾಸಿಯು ತನ್ನ ಕುತ್ತಿಗೆಯನ್ನು ಅಲ್ಲಾಡಿಸಿದನು. ' ಸುಳ್ಳು ಹೇಳಬೇಡ. ಇಲ್ಲಿ ಎಲ್ಲೆಲ್ಲಿ ಗುಹೆಗಳಿವೆ ಎಂಬ ವಿಷಯವನ್ನು ನಮಗೆ ತಿಳಿಸದಿದ್ದರೆ ಈ ಚಾಕುವಿನಿಂದ ನಿನ್ನನ್ನು ಬಗೆದು ಹಾಕುತ್ತೇವೆ ', ಎಂದು ಅಬ್ಬರಿಸಿದ ನಿಂಗ. ನಿಂಗನ ಈ ಅಬ್ಬರಿಕೆಗೆ ಪ್ರಾರುತ್ತರವಾಗಿ ಸನ್ಯಾಸಿಯು ಕೇವಲ ಮುಗುಳ್ನಗೆ ನಕ್ಕು ಮತ್ತೆ ಹೊರಳಿ ಮಲಗಿಬಿಟ್ಟನು. ಇದುವರೆಗೆ ಮುಖವನ್ನು ತನ್ನ ಮಡಿಲಲ್ಲಿ ಇಟ್ಟುಕೊಂಡು ಮಲಗಿದ್ದ ಹಾವು ಈಗ ಮುಖವನ್ನು ಹೊರಚಾಚಿ ಈ ಮೂವರನ್ನು ನೋಡುತ್ತಿತ್ತು. ಸನ್ಯಾಸಿ ಮಾತ್ರ ಯಾವ ಭಯವೂ ಇಲ್ಲದಂತೆ ಅಲ್ಲಿ ಮಲಗಿದ್ದನು. ಕದೀಮರಿಗೆ ಏನು ಮಾಡಬೇಕೆಂದು ತೋಚಲಿಲ್ಲ. ಸನ್ಯಾಸಿಯನ್ನು ಎಳೆದರೆ ಹಾವು ಇವರ ಮೇಲೆ ಧಾಳಿಮಾಡಬಹುದಾಗಿತ್ತು. ಅಲ್ಲದೇ ಇಂಥ ಕಾಡುಪ್ರಾಣಿಗಳ ಜೊತೆ ಕಾದಾಡಿ ಅವರಿಗೆ ಅನುಭವವೂ ಇರಲಿಲ್ಲ.

' ಈಗ ಈ ಬೈರಾಗಿಯನ್ನು ಬಿಟ್ಟು ಚಂಡೀದಾಸನತ್ತ ಹೋಗುವುದೇ ಒಳ್ಳೆಯದು ' ಎಂದು ಕಣ್ಣನ್ ಸೂಚಿಸಿದರು.

' ಸಧ್ಯ ಅದು ಸಾಧ್ಯವಿಲ್ಲ. ಈ ಸನ್ಯಾಸಿಯು ಇಲ್ಲಿ ಒಬ್ಬನೇ ಇರಲಾರ, ಸ್ವಲ್ಪ ಸಮಯ ಕಾದರೆ ಈತನ ಚಟುವಟಿಕೆಗಳು ನಮಗೆ ಅರ್ಥವಾಗಬಹುದು. ನಾಳೆ ಬೆಳಿಗ್ಗೆವರೆಗೆ ಕಾಯೋಣ. ಏನೂ ಆಗದಿದ್ದರೆ ಕಬ್ಬಿಣದ ಬೆಟ್ಟದತ್ತ ಸಾಗೋಣ ', ಎಂದು ಸೂಚಿಸಿದ ಜಾರ್ಜ್. ಈ ಮಾತಿಗೆ ಮೂವರೂ ಒಪ್ಪಿದರು. ಆ ದಿನ ಅಡಿಗೆಗಾಗಿ ಅವರು ಅಲ್ಲಿಯೇ ಬೆಂಕಿಯನ್ನು ಹೊತ್ತಿಸಿ ಕೊಂಡರು. ಆ ಕಾಡಿನಲ್ಲಿ ಒಳನುಸುಳಿ ನಿಂಗನು ಒಂದು ಮೊಲವನ್ನು ಕೊಂದು ತಂದನು. ಅದರ ಮೇಲಿನ ಚರ್ಮವನ್ನು ಸುಲಿದು ಅದನ್ನು ಬೆಂಕಿಯ ಮೇಲೆ ಬೇಯಿಸಲು ಮೂವರೂ ತೊಡಗಿದರು. ಅದರಿಂದ ಬರುತ್ತಿದ್ದ ವಾಸನೆ ಆ ಸನ್ಯಾಸಿಯನ್ನು ಇವರೆಡೆಗೆ ನೋಡುವಂತೆ ಮಾಡಬಹುದೆಂದು ಕದೀಮರು ತಿಳಿದಿದ್ದರು. ಆದರೆ ಇದಾವುದರ ಪರಿವೆಯೂ ಇಲ್ಲದೆಯೇ ಇವರು ಅಲ್ಲಿ ಉಪಸ್ಥಿತರೇ ಇಲ್ಲವೆಂಬಂತೆ ಆ ಸನ್ಯಾಸಿಯು ಪೂರ್ಣ ನಿರ್ಲಿಪ್ತನಾಗಿ ಮಲಗಿದ್ದನು. ಆ ದಿನದ ಅಡಿಗೆ ಸಿದ್ಧವಾದ ಮೇಲೆ ಮೂವರೂ ಸನ್ಯಾಸಿಯು

ಇರುವನ್ನು ಮರೆತು ಹಸಿದ ಹುಚ್ಚರಂತೆ ಮೊಲದ ಮಾಂಸವನ್ನು ತಿನ್ನ ತೊಡಗಿದರು. ಹೊಟ್ಟೆ ಭರ್ತಿ ತಿಂದ ಮೇಲೆಯೇ ಅವರು ಸನ್ಯಾಸಿಯ ಕಡೆ ಹೊರಳಿದರು.

'ಇವನಿಗೇನಾದರೂ ಹಸಿವೆಗಿಸವೇ ಇದೆಯೋ ಇಲ್ಲವೋ'? ಎನ್ನುತ್ತಾ ನಿಂಗನು ಮೊಲದ ಮಾಂಸದ ತುಂಡೊಂದನ್ನು ತೆಗೆದುಕೊಂಡು ಆ ಸನ್ಯಾಸಿಯ ಕಡೆ ನಡೆದನು. ಈ ಸಲ ತಟ್ಟಿದೊಡನೆ ಸನ್ಯಾಸಿಯು ಎದ್ದು ಕುಳಿತನು. ಹಾಗೆಯೇ ದಿಂಬಾಗಿದ್ದ ಹಾವು ನಿಧಾನವಾಗಿ ಬಿಚ್ಚಿಕೊಳ್ಳುತ್ತಾ ಒಂದು ಸಲ ತನ್ನ ಬಾಯನ್ನು ಪೂರ್ತಿಯಾಗಿ ಅಗಲಿಸಿತು. ಆದನ್ನು ಕಂಡ ಕದೀಮರ ಕೈಕಾಲುಗಳಲ್ಲಿ ನಡುಕವು ಪ್ರಾರಂಭವಾಯಿತು. ಏಕೆಂದರೆ ಆ ಹಾವಿನ ತೆರೆದ ಬಾಯಿಯು ಎಷ್ಟು ದೊಡ್ಡದಾಗಿತ್ತೆಂದರೆ ಅದು ಒಬ್ಬ ಮನುಷ್ಯನನ್ನು ಸಹಜವಾಗಿ ನುಂಗಬಹುದಾಗಿತ್ತು. ಮೊಲದ ಮಾಂಸವನ್ನು ಕೈಯಲ್ಲಿ ಹಿಡಿದು ನಿಂತ ನಿಂಗನ ಕೈಯು ಈ ದೃಶ್ಯವನ್ನು ನೋಡಿ ಗಡಗಡನೆ ನಡುಗಲು ಪ್ರಾರಂಭಿಸಿದ. ಆದರೆ ಸನ್ಯಾಸಿಯು ಮಾತ್ರ ಅದೇ ಹೊಳೆಯುವ ಕಣ್ಣುಗಳು ಮತ್ತು ಮುಗುಳ್ನಗೆಯಿಂದ ಆ ಮಾಂಸವು ತನಗೆ ಬೇಡವೆಂದು ಸೂಚಿಸಿದ. ಮೂವರೂ ಕದೀಮರು ಈಗ ಹಿಂದೆ ಸರಿದು ತಮ್ಮಲ್ಲಿಯೇ ಮಾತನಾಡತೊಡಗಿದರು.

'ಸುಮ್ಮನೆ ಈ ಸನ್ಯಾಸಿಯ ಗೊಡವೆಯೇ ಬೇಡ ನಮಗೆ. ನಾವು ಬಂದ ಕೆಲಸವನ್ನು ಮರೆತು ಇಲ್ಲಿ ಉಳಿಯುವುದು ಅಪಾಯಕಾರಿ' ಎಂದು ಕಣ್ಣನ್ ನುಡಿದ. ಸ್ವಲ್ಪ ಯೋಚಿಸಿದ ನಂತರ ಜಾರ್ಜ್ ಹೇಳಿದ, 'ಹಾಗೆಯೇ ಆಗಲಿ. ಇನ್ನು ಕಬ್ಬಿಣದ ಬೆಟ್ಟದತ್ತ ಹೋಗೋಣ'. ಅತನು ಇಷ್ಟು ಹೇಳಿದೊಡನೆ ಮೂವರೂ ತಮ್ಮ ಸಾಮಾನುಗಳನ್ನು ಎತ್ತಿಕೊಂಡು ಹೊರಡಲು ಅನುವಾದರು. ಆದರೆ ಅವರು ಒಂದು ಹೆಜ್ಜೆ ಇಡುವುದರೊಳಗಾಗಿ ಅವರ ಸುತ್ತಲೂ ಚಟ ಚಟ ಎಂಬ ಶಬ್ದವು ಪ್ರಾರಂಭವಾಯಿತು. ಮುಂದೆ ಕೆಲ ನಿಮಿಷಗಳಲ್ಲಿ ಅವರ ಸುತ್ತಲೂ ಕಾಡ್ಗಿಚ್ಚು ಕಾಣಿಸಿಕೊಂಡಿತು. ಆಶ್ಚರ್ಯವೆಂದರೆ ಆ ಮೂವರೂ ನಿಂತ ಹತ್ತು ಗಜ ಸ್ಥಳದಲ್ಲಿ ಮಾತ್ರ ಬೆಂಕಿ ಹತ್ತಿಕೊಂಡಿರಲಿಲ್ಲ. ಕ್ರಮೇಣ ಬೆಂಕಿಯು ತನ್ನ ನಾಲಿಗೆಯನ್ನು ಇವರಿಂದ ಹತ್ತು ಗಜ ದೂರದಲ್ಲಿ ಚಾಚತೊಡಗಿತು. ಬೆಂಕಿಯು ಇವರನ್ನು ಮುಟ್ಟಲಿಲ್ಲ.

ಇಡೀ ಆ ಕಾಡು ಮತ್ತು ಕೊಳ್ಳವು ಹೊಗೆಯಿಂದ ತುಂಬಿ ಹೋಗಿತ್ತು. ಬರುಬರುತ್ತಾ ಇವರು ನಿಂತ ಸ್ಥಳದಲ್ಲಿ ಬೆಂಕಿಯ ಶಾಖವು ಹೆಚ್ಚಾಗತೊಡಗಿತು. ಕ್ರಮೇಣ ಅದು ಏರುತ್ತಾ ಹೋದ ಹಾಗೆ ಮೂವರೂ 'ಸಹಾಯ, ನೀರು, ದಾಹ, ಅಯ್ಯೋ' ಎಂದು ಅರಚಿ ಅರಚಿ ಪ್ರಜ್ಞೆ ತಪ್ಪಿದವರಾಗಿ ಬಿದ್ದುಬಿಟ್ಟರು.

ಮೂವರಿಗೂ ಎಚ್ಚರವಾದಾಗ ಸೂರ್ಯ ಮರುದಿನ ಉದಯಿಸುತ್ತಿದ್ದ. ರಾತ್ರಿ ಮಳೆಯಾಗಿರುವ ಲಕ್ಷಣವೆಂಬಂತೆ ನೆಲವೆಲ್ಲಾ ತೋಯ್ದು ಹಸಿಯಾಗಿತ್ತು. ಹೀಗಾಗಿ ಬೆಂಕಿಯು ನಂದಿ ಇವರ ಸುತ್ತಲಿನ ಸ್ಥಳ ಪೂರ್ತಿಯಾಗಿ ಸುಟ್ಟು ಬಯಲಾಗಿ ಕಪ್ಪಾಗಿತ್ತು. ಸ್ವಲ್ಪ ದೂರದ ವಸ್ತುಗಳು ಈಗ ಕಾಣುತ್ತಿದ್ದವು. ಸನ್ಯಾಸಿ ಮತ್ತು ಹಾವು ಇದ್ದ ಸ್ಥಳವನ್ನು ಮೂವರೂ ಎದ್ದು ಓಡಿ ಹೋಗಿ ನೋಡಿದರು. ಅಲ್ಲಿ ಈಗ ಏನೂ ಇರಲಿಲ್ಲ. ಆತ ಮತ್ತು ಆತನ ಹಾವು ಸುಟ್ಟು ಹೋಗಿದ್ದರೆ ಅವರ ಗುರುತಾದರೂ ಇರಬೇಕಾಗಿತ್ತು. ಅದೂ ಕೂಡ ಇರಲಿಲ್ಲ. ನಂತರ ಮೂವರೂ ದೂರದಲ್ಲಿ ಹೊರಟ ಒಂದು ಆಕೃತಿಯನ್ನು ನೋಡಿದರು. ಜಾರ್ಜ್ ಕೂಡಲೇ ದೂರದರ್ಶಕದ ಮೂಲಕ ಆ ಆಕೃತಿಯನ್ನು ವೀಕ್ಷಿಸಿದನು. ಆ ದೃಶ್ಯವನ್ನು ನೋಡಿ ಆತನ ಮೈಯು ನಡುಗತೊಡಗಿತು. ತಾವು ಕಂಡ ಸನ್ಯಾಸಿಯು ಬಹು ದೂರದಲ್ಲಿ ತನ್ನ ಹೆಗಲ ಮೇಲೆ ಹೆಬ್ಬಾವನ್ನು ಹಾಕಿಕೊಂಡು ನಿಧಾನಕ್ಕೆ ನಡೆದು ಹೋಗುತ್ತಿದ್ದನು. ಉಳಿದ ಇಬ್ಬರೂ ದೂರದರ್ಶಕದ ಮೂಲಕ ಆ ದೃಶ್ಯವನ್ನು ಕಂಡು ಮೂಕ ವಿಸ್ಮಿತರಾದರು.

ಭಯದಿಂದ ಮೂವರೂ ಒಬ್ಬರನೊಬ್ಬರು ನೋಡಿದರು. ಬಾಯಿಂದ ಮಾತುಗಳು ಹೊರಡಲಿಲ್ಲ.

೨೬

ಗಾಮಾ ಮತ್ತು ಆತನ ತಂಡದವರು ದಿನಪೂರ್ತಿ ಆಲದ ಮರಕ್ಕಾಗಿ ಹುಡುಕಾಟವನ್ನು ನಡೆಯಿಸಿದರು. ಆದರೆ ಅವರ ಹುಡುಕಾಟ ಆ ದಿನ ಸಫಲವಾಗಲಿಲ್ಲ. ರಾತ್ರಿ ಅವರು ತಮ್ಮ ಡೇರೆಗಳಿಗೆ ದಣಿದು ಸುಸ್ತಾಗಿ

ಮರಳಿದರು. ನರಸಿಂಹಮೂರ್ತಿಗಳು ಮಾತ್ರ ದಣಿದಿದ್ದರೂ ಮುಖದಲ್ಲಿ ಉತ್ಸಾಹದ ಕಳೆಯನ್ನು ಹೊಂದಿದ್ದರು. ಪ್ರಶಾಂತ, ಗುಂಡಪ್ಪ ಮತ್ತು ಚಂಡೀದಾಸರು ಗಾಮೂನನ್ನು ಬಂಧಿಸಬೇಕೆ ಬೇಡವೇ ಎಂಬ ಜಿಜ್ಞಾಸೆಯಲ್ಲಿ ತೊಡಗಿದ್ದರು,

'ಗಾಮೂನನ್ನು ಬಂಧಿಸುವುದು ಅಪಾಯಕಾರಿ ಮತ್ತು ಅಸಾಧ್ಯವಾದದ್ದು ಎಂದು ನಮಗೆಲ್ಲಾ ಗೊತ್ತಿದೆ' ಎಂದ ಚಂಡೀದಾಸ.

'ಅಪಾಯಕಾರಿ ಎಂದು ನಾವು ಸುಮ್ಮನೆ ಕುಳಿತರೆ ಆತನು ನಮ್ಮೆಲ್ಲರನ್ನೂ ಬಂಧಿಗಳನ್ನಾಗಿ ಮಾಡಿ ಅವನು ಹೇಳುವಂತೆ ಮಾಡುತ್ತಾನೆ' ಎಂದ ಪ್ರಶಾಂತ.

ರೀಟಾ ಈಗ ಮಧ್ಯ ಪ್ರವೇಶಿಸಿ ಹೇಳಿದಳು, 'ನಾಳೆ ಸಂಜೆಯವರೆಗೆ ನೋಡೋಣ. ನಾಳೆಯ ಸಂಜೆಯ ಹೊತ್ತಿಗೆ ಆಲದಮರದ ಪತ್ತೆಯಾದರೆ ನಮ್ಮ ಮುಂದಿನ ಹೆಜ್ಜೆಯನ್ನು ನಿರ್ಧರಿಸೋಣ. ಒಂದು ವೇಳೆ ಆಲದಮರವು ಪತ್ತೆಯಾಗದಿದ್ದರೆ ನಾವು ಸರಸ್ವತಿಯನ್ನು ಒತ್ತೆಯಾಳಾಗಿ ಬಂಧಿಸಿಬಿಡೋಣ. ಅವಳ ಜೀವವು ರಕ್ಷಣೆಯಾಗಬೇಕಿದ್ದರೆ ನಮ್ಮನ್ನು ಬಿಟ್ಟುಬಿಡಬೇಕೆಂಬ ಶರತನ್ನು ಗಾಮೂನ ಮುಂದೆ ಇಡೋಣ'.

'ಇದೀಗ ಸರಿಯಾದ ವಿಚಾರ' ಎಂದ ಚಂಡೀದಾಸ.

'ಒಂದು ವೇಳೆ ಆ ಗಾಮೂನಿಗೆ ಸಾಯುವಾಗಲು ಸಾಧ್ಯವಿಲ್ಲದಿದ್ದರೆ ಅವನ ಮೂಳೆಯನ್ನು ಜಜ್ಜಿ ಹಾಕಬಹುದಾಗಿತ್ತು' ಎಂಬ ಗುಂಡಪ್ಪನ ಮಾತಿಗೆ ಎಲ್ಲರೂ ನಕ್ಕರು.

'ಈ ಪ್ರಕರಣದಲ್ಲಿ ಕದೀಮರ ತಂಡ ಇವೆ ಎಂದು ಚಂಡೀದಾಸರು ಹೇಳುತ್ತಾರೆ. ನಿಧಿಗಾಗಿ ಆ ಕದೀಮರು ಹೊರಟರೆ ಈ ಗಾಮೂ ಮಹಾರಾಯ ನಮ್ಮನ್ನು ಬಂಧಿಯಾಗಿ ಮಾಡಿಕೊಂಡು ಪರಮಾತ್ಮನ-ನ್ವೇಷಣೆಗೆ ಹೊರಟಿದ್ದಾನೆ. ಆದರೆ ಈ ಗಾಮೂನ ಅನ್ವೇಷಣೆಗೇ ಇನ್ನೊಂದು ತಂಡ ಹೊರಟಿರುವಂತೆ ಈ ದಿನ ನನಗೆ ತೋರಿತು.' ಎಂದ ಪ್ರಶಾಂತ.

'ಅದೇ ವಿಷಯುವನ್ನು ನಾನೂ ಹೇಳಬೇಕೆಂದು ಮಾಡಿದ್ದೆ. ಈ ದಿನ ಹಬ್ಬಿಣದ ಜೆಟ್ಟಿದ ಕೆಳಭಾಗದಲ್ಲಿ ಆಲದಮರಕ್ಕಾಗಿ ನಾವು ಶೋಧನೆ ಮಾಡುತ್ತಿರುವಾಗ ಜೆಟ್ಟಿನ ತುದಿಯಲ್ಲಿ ಕೆಲವು ಆಕೃತಿಗಳ ಚಲನವಲನ ನನಗೆ

ಕಂಡುಬಂದಿತು', ಎಂದು ತನ್ನ ಮಾತನ್ನು ಮುಂದುವರಿಸುತ್ತಾ ಗುಂಡಪ್ಪ ಹೇಳಿದ, 'ನಾನು ಪೊದೆಗಳ ಮಧ್ಯೆ ನುಸುಳಿಕೊಂಡು ಬೆಟ್ಟದ ತುದಿಯನ್ನು ಬದಿಯಿಂದ ತಲುಪಿದೆ. ಅಲ್ಲಿ ಒಂದು ಬಂಡೆಯ ಹಿಂಭಾಗದಲ್ಲಿ ಅಡಗಿ ಕುಳಿತೆ. ಜನಾರ್ಧನರ ಮನೆಯಲ್ಲಿ ನಾನು ನೋಡಿದ ವ್ಯಕ್ತಿಯು ತನ್ನ ಇನ್ನಿಬ್ಬರು ಸಂಗಡಿಗರೊಂದಿಗೆ ಅಲ್ಲಿ ಇದ್ದ. ಮೇಲಾಗಿ ಒಂದು ಚಿಕ್ಕ ಟ್ರಾನ್ಸ್‌ಫಾರ್ಮರ್ ಮೂಲಕ ಸಂದೇಶ ಕಳುಹಿಸುತ್ತಿದ್ದರೆಂದು ನನಗೆ ತೋರಿತು. ಗಾಮಾನನ್ನು ಅವರು ಹುಡುಕುತ್ತಿದ್ದಾರೆ ಎನ್ನುವುದರಲ್ಲಿ ಸಂಶಯವೇ ಇಲ್ಲ. ಇನ್ನು ಅವರು ಕಳುಹಿಸುತ್ತಿರುವ ಸಂದೇಶದ ಪರಿಣಾಮವೇನಾಗಬಹುದು ಎಂಬುದನ್ನು ಕಾದುನೋಡಬೇಕು'.

'ಗಾಮಾನನ್ನು ಹುಡುಕಲು ಅವನ ಸಂಗಡಿಗರು ಯತ್ನಿಸುತ್ತಿದ್ದಾರೆ, ಎಂಬ ವಿಷಯವನ್ನು ಆತನೇ ಹೇಳಿದ್ದ. ಆದರೆ ಅವರು ಸಂದೇಶವನ್ನು ಕಳುಹಿಸಿ ಏನು ಮಾಡಲು ಯತ್ನಿಸುತ್ತಿದ್ದಾರೆ ಎನ್ನುವ ವಿಷಯ ಮಾತ್ರ ಅರ್ಥವಾಗುತ್ತಿಲ್ಲ'. ಎಂದ ಪ್ರಶಾಂತ ನುಡಿದ.

'ಆತನನ್ನು ಅವರು ಹುಡುಕುತ್ತಿದ್ದರೆ ನಾವೇಕೆ ಈಗಲೇ ಹೋಗಿ ಅವರನ್ನು ಬಂಧಿಸಬಾರದು'? ಎಂದು ಚಂಡೀದಾಸ ಕೇಳಿದ. ಪ್ರಶಾಂತನು ಸೂಕ್ಷ್ಮವಾಗಿ ಅನ್ಯಲೋಕದ ಜೀವಿಗಳ ಬೆಳಕಿನ ಸ್ವರೂಪ ಮತ್ತು ಇತರ ಶಕ್ತಿಗಳ ಬಗೆಗೆ ಒಂದು ಪುಟ್ಟ ವ್ಯಾಖ್ಯಾನವನ್ನು ಕೊಟ್ಟ. ಇದರಿಂದ ತಾವು ಎಂಥ ನಿಗೂಢವಾದ ಮತ್ತು ಅಪಾಯಕಾರಿಯಾದ ಪರಿಸ್ಥಿತಿಯಲ್ಲಿ ಇದ್ದೇವೆ ಎಂಬುದರ ಅರಿವು ಚಂಡೀದಾಸನಿಗೆ ಆಯಿತು. ಈಗ ಆ ತಂಡದವರಿಗೆ ಆಲದಮರವನ್ನು ಪತ್ತೆಹಚ್ಚಬೇಕೆಂದಾಗಲೀ, ಕಮೀಮರನ್ನು ಹಿಡಿಯಬೇಕೆಂದಾಗಲೀ ಅಥವಾ ನಿಧಿಯನ್ನು ನೋಡಬೇಕೆನ್ನುವ ಆಸೆಯಾಗಲಿ ಉಳಿದಿರಲಿಲ್ಲ. ಅವರಿಗೆ ಈಗ ಮುಖ್ಯವಾಗಿ ತಾವು ಅಲ್ಲಿಂದ ಹೇಗೆ ಬಿಡುಗಡೆ ಪಡೆಯಬೇಕೆಂಬ ಸಮಸ್ಯೆಯು ಕಾಡುತ್ತಿತ್ತು. ಮೇಲಾಗಿ ಕುತೂಹಲವೂ ಮಾಯವಾಗುತ್ತಾ ಬರತೊಡಗಿತು. ಆದರೆ ಗಾಮಾನ ಆಜ್ಞೆಯನ್ನು ಅನುಸರಿಸಿ ಅವರೆಲ್ಲರೂ ಬೆಳಗಿನ ಒಂಭತ್ತು ಗಂಟೆಗೆ ಎಲ್ಲಾ ಸಲಕರಣೆಗಳನ್ನು ತೆಗೆದುಕೊಂಡು ಆಲದಮರದ ಶೋಧನೆಗಾಗಿ ಹೊರಟರು. ಅವರು ನಿನ್ನೆ ಶೋಧಿಸಿದ ಸ್ಥಳವನ್ನು ಬಿಟ್ಟು ಬೇರೆ ಪ್ರದೇಶದಲ್ಲಿ ತಮ್ಮ ಹುಡುಕಾಟವನ್ನು

ಪ್ರಾರಂಭಿಸಿದರು. ಈ ದಿನ ಅವರು ಹೆಚ್ಚು ದೂರ ಕ್ರಮಿಸಬೇಕಾಗಲಿಲ್ಲ. ಕಬ್ಬಿಣದ ಬೆಟ್ಟದ ಈಶಾನ್ಯ ದಿಕ್ಕಿನಲ್ಲಿ ಅವರು ಹುಡುಕಲು ತೊಡಗಿದ ಒಂದು ಗಂಟೆಯಲ್ಲಿಯೇ ಆಲದ ಮರವೊಂದು ಮೊದಲು ನರಸಿಂಹಮೂರ್ತಿಗಳ ಕಣ್ಣಿಗೆ ಬಿದ್ದಿತು. ಮೂರ್ತಿಗಳು ಎಲ್ಲರನ್ನೂ ಕರೆದು ಆ ಮರವನ್ನು ತೋರಿಸಿದರು. ಮರವು ವಿಚಿತ್ರವಾದ ರೀತಿಯಲ್ಲಿ ನಂಬಲು ಅಸಾಧ್ಯವಾದ ಸ್ಥಳದಲ್ಲಿ ಬೆಳೆದಿತ್ತು. ಆ ಮರವು ಬೆಟ್ಟದ ಒಂದು ತೀವ್ರ ನೇರವಾದ ಪ್ರದೇಶದಲ್ಲಿ ಭೂಮಿಗೆ ಸಮಾಂತರವಾಗಿ ಬೆಳೆದು ನಿಂತಿತ್ತು. ಇದು ನೋಡಲು ಆಶ್ಚರ್ಯವೆನಿಸಿದರೂ ವೈಜ್ಞಾನಿಕವಾಗಿ ಕುತೂಹಲದ ವಿಷಯವಾಗಿರಲಿಲ್ಲ. ಏಕೆಂದರೆ ಸೂರ್ಯನು ಆ ಬೆಟ್ಟದ ಎದುರು ಭಾಗದಲ್ಲಿ ಉದಯಿಸುತ್ತಿದ್ದನು. ಮಧ್ಯಾಹ್ನದ ಸಮಯದ ನಂತರ ಸೂರ್ಯನು ಸುಮಾರಾಗಿ ಬೆಟ್ಟದಿಂದ ಮರೆಯಾಗುತ್ತಿದ್ದನು. ಅಷ್ಟರ ಮಟ್ಟಿಗೆ ಬೆಟ್ಟದ ತುದಿಯು ಪೂರ್ವ ದಿಕ್ಕಿನತ್ತ ಚಾಚಿಕೊಂಡು ನಿಂತಿತ್ತು.

ಆಲದ ಮರವನ್ನು ಕಂಡು ಮುಂದೆ ಏನನ್ನು ನಿರೀಕ್ಷಿಸಬಹುದೆಂಬ ವಿಷಯವು ಗಾಮಾ, ನರಸಿಂಹಮೂರ್ತಿ ಮತ್ತು ಸರಸ್ವತಿಗೆ ಮಾತ್ರ ತಿಳಿದಿತ್ತು. ಆದರೆ ತನಗೆ ಗೊತ್ತಿರುವ ವಿಷಯವು ಸರಸ್ವತಿಗೂ ಗೊತ್ತಿದೆ ಎನ್ನುವ ವಿಷಯ ಮಾತ್ರ ನರಸಿಂಹಮೂರ್ತಿಗಳಿಗೆ ಗೊತ್ತಿರಲಿಲ್ಲ.

‘ಸರಿ, ಆಲದ ಮರವನ್ನು ನೋಡಿದ್ದಾಯಿತು. ಇನ್ನು ಮುಂದೇನು’ ಎಂದು ಸಹನೆಯನ್ನು ಕಳೆದುಕೊಂಡ ಗುಂಡಪ್ಪ ಕೇಳಿದ.

‘ನಾವು ಹುಡುಕುತ್ತಿರುವ ಗುಹೆಯು ಆ ಆಲದ ಮರದ ಕೆಳಗಿದೆ ಎಂದು ನೀವು ಹೇಳಬಹುದು’ ಎನ್ನುತ್ತಾ ತನ್ನ ಮಾತನ್ನು ಮುಂದುವರೆಸಿ ಪ್ರಶಾಂತ ಹೇಳಿದ, ‘ಆದರೆ ಆ ಮರದ ಸ್ಥಳವನ್ನು ನಾವು ತಲುಪುವುದು ಸಾಧ್ಯವೇ ಇಲ್ಲ. ಅದು ಇರುವ ಸ್ಥಳವನ್ನಾದರೂ ನೋಡಿರಿ. ಆ ನೇರವಾದ ಬೆಟ್ಟದ ಇಳಿಜಾರಿನಲ್ಲಿ ನಾವು ಹೋಗಲು ಪ್ರಯತ್ನ ಪಟ್ಟದ್ದೇ ಆದರೆ ನಮ್ಮ ಸಾವು ಖಂಡಿತ’. ಆತನು ತನ್ನ ಮಾತನ್ನು ಮುಗಿಸುತ್ತಿದ್ದಂತೆಯೇ ಆಲದ ಮರವು ಅಲುಗಾಡಲು ಪ್ರಾರಂಭಿಸಿತು. ಎಲ್ಲರೂ ಆಶ್ಚರ್ಯದಿಂದ ಆ ಕಡೆ ನೋಡುತ್ತಿದ್ದರು. ಅಲ್ಲಿ ಒಂದು ಹಗ್ಗವು ಆಲದಮರಕ್ಕೆ ಸಿಕ್ಕಿಹಾಕಿಕೊಂಡಿತ್ತು. ಇನ್ನೊಂದು ಭಾಗದಿಂದ ಅದನ್ನು ಯಾರೋ ಎಳೆಯುತ್ತಿದ್ದರು. ಕ್ರಮೇಣ ಆ ಹಗ್ಗದ ಗುಂಟ ಮೂರು ಆಕೃತಿಗಳು ಏರುತ್ತಿರುವುದು ಕಂಡುಬಂದಿತು.

ಚಂಡೀದಾಸನು ಕೂಡಲೇ ಅವರನ್ನು ಕದೀಮರೆಂದು ಗುರುತಿಸಿದ. ಆದರೆ ಅವರನ್ನು ಬಂದಿಸಬೇಕೆಂಬ ಪೋಲೀಸ್ ಬುದ್ಧಿಯು ಅವನಲ್ಲಿ ಜಾಗೃತ ವಾಯಿತು. ಹೀಗಾಗಿ ಎಷ್ಟು ಬೇಡವೆಂದರೂ ಕೇಳದೆ ಆಲದ ಮರದತ್ತ ಇಳಿಯತೊಡಗಿದನು. ಕದೀಮರು ಈಗ ಹಿಂದೆ ಹೋಗುವಂತಿರಲಿಲ್ಲ. ಹಗ್ಗದ ಒಂದು ತುದಿಯು ಆಲದ ಮರಕ್ಕೆ ಸಿಕ್ಕುಹಾಕಿಕೊಂಡಿದ್ದರೆ ಇನ್ನೊಂದು ತುದಿಯು ಗಾಳಿಯಲ್ಲಿ ತೇಲಾಡತೊಡಗಿತ್ತು. ಚಂಡೀದಾಸನಿಗೆ ತಾನು ಆರಿಸಿ ಕೊಂಡಿರುವ ಮಾರ್ಗವು ಸುಲಭವಲ್ಲವೆಂದು ತಿಳಿದಿದ್ದ. ಆದರೆ ಕಾಲುಗಳು ಒಂದೇ ಸಮನೆ ಜಾರತೊಡಗಿದಾಗ ಆತನಲ್ಲಿ ಪ್ರಾಣಭಯವು ಹುಟ್ಟಿಕೊಂಡಿತು. ಇದೇ ಸಮಯಕ್ಕೆ ಸರಿಯಾಗಿ ಪ್ರಶಾಂತನು ತನ್ನ ಕೈಯಲ್ಲಿಯ ಹಗ್ಗವನ್ನು ಚಂಡೀದಾಸನತ್ತ ಎಸೆದ. ಹಗ್ಗದ ತುದಿಯು ಚಂಡೀದಾಸನನ್ನು ಹಲವಾರು ಪ್ರಯತ್ನದ ನಂತರ ತಲುಪಿತು. ಆತನು ಹಗ್ಗವನ್ನು ತನ್ನ ಸೊಂಟಕ್ಕೆ ಗಟ್ಟಿಯಾಗಿ ಕಟ್ಟಿಕೊಂಡು ಇಳಿಯಲು ಪ್ರಾರಂಭಿಸಿದರು. ಆತನು ಆ ಆಲದ ಮರವನ್ನು ಸಮೀಪಿಸುತ್ತಿದ್ದಂತೆಯೇ ಕದೀಮರ ತಂಡವು ಚಂಡೀದಾಸನನ್ನು ಗುರುತಿಸಿತು. ಕೂಡಲೇ ಜಾರ್ಜನು ತನ್ನ ಜೇಬಿನಲ್ಲಿದ್ದ ರಿವಾಲ್ವರನ್ನು ಹೊರತೆಗೆದು ಅದನ್ನು ತನ್ನ ಬಾಯಲ್ಲಿ ಹಿಡಿದುಕೊಂಡು ಹಗ್ಗದ ಮೂಲಕ ನೇರವಾಗಿ ಏರತೊಡಗಿದನು. ಚಂಡೀದಾಸನನ್ನು ಕಂಡು ಭಯದಿಂದ ಅವರು ಕೆಳಗೆ ಹೋಗಿದ್ದರೆ ಸಾವನ್ನು ಬಿಟ್ಟು ಅವರಿಗೆ ಬೇರೆ ಮಾರ್ಗವೇ ಇರಲಿಲ್ಲ. ಇಂಥ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದ ಗುಂಡಪ್ಪ ಮತ್ತು ಪ್ರಶಾಂತರು ತಾವು ಕೂಡ ಚಂಡೀದಾಸನ ನೆರವಿಗೆ ಹೋಗಬೇಕೆಂದು ಕೈಯಲ್ಲಿ ಹಿಡಿದಿದ್ದ ಹಗ್ಗವನ್ನು ಒಂದು ಮರಕ್ಕೆ ಭದ್ರವಾಗಿ ಕಟ್ಟಿದರು. ನಂತರ ಅದೇ ಹಗ್ಗವನ್ನು ಹಿಡಿದುಕೊಂಡು ಕಡಿದಾದ ಆ ಪರ್ವತದ ಜಾರುವ ಬಂಡೆಗಳ ಮೇಲೆ ಪ್ರಾಣಭಯವನ್ನು ತೊರೆದು ಇಳಿಯತೊಡಗಿದರು. ಆ ಕಡೆ ಕದೀಮರಲ್ಲಿ ಹಗ್ಗವನ್ನು ಏರುತ್ತಿರುವವರಲ್ಲಿ ನಿಂಗನು ಕೊನೆಯವ ನಾಗಿದ್ದನು. ಆತನು ಒಂದು ಕೈಯಿಂದ ಹಗ್ಗವನ್ನು ಹಿಡಿದು ಇನ್ನೊಂದು ಕೈಯಿಂದ ಜೇಬಿನೊಳಗಿನ ತನ್ನ ಚಾಕುವನ್ನು ಹೊರತೆಗೆದನು. ಅದನ್ನು ನೇರವಾಗಿ ಗುರಿಯಿಟ್ಟು ಚಂಡೀದಾಸನತ್ತ ಎಸೆದನು. ಸ್ವಲ್ಪದರಲ್ಲಿ ತನ್ನ ಗುರಿಯನ್ನು ಕಳೆದುಕೊಂಡ ಆ ಚಾಕುವು ಚಂಡೀದಾಸನ ಆಧಾರಕ್ಕಿದ್ದ

ಬಿಳಿಯ ದಪ್ಪನಾದ ಹಗ್ಗದ ಮೇಲ್ಭಾಗದಲ್ಲಿ ಬಂದು ಸಿಕ್ಕಿಹಾಕಿಕೊಂಡಿತು. ಹಗ್ಗವು ಹರಿಯಲಿಲ್ಲವಾದರೂ ಅದು ಶಿಥಿಲಗೊಂಡಿತು ಎಂದು ಪ್ರಶಾಂತನು ಅರಿತನು. ಹೀಗಾಗಿ ಬಂಡೆಗಳ ಮೇಲೆ ಕಾಲಿಡುತ್ತಾ ನಿಧಾನವಾಗಿ ಇಳಿಯುವುದರ ಬದಲು ನೇರವಾಗಿ ಆತನು ಬರಿಯ ಹಗ್ಗಕ್ಕೆ ಜೋತುಬಿದ್ದು ಕ್ಷಣಾರ್ಧದಲ್ಲಿ ಚಂಡೀದಾಸನನ್ನು ಸೇರಿಕೊಂಡನು. ಗುಂಡಪ್ಪನು ಕೂಡ ಇದೇ ಮಾದರಿಯನ್ನು ಅನುಸರಿಸಿ ಪ್ರಶಾಂತನ ಹಿಂದೆ ಬಂದನು. ಅವನು ಹಗ್ಗದಲ್ಲಿ ಸಿಕ್ಕಿಹಾಕಿಕೊಂಡಿದ್ದ ಚಾಕುವನ್ನು ಬಿಡಿಸಿ ತನ್ನ ಬಾಯಲ್ಲಿ ಹಿಡಿದುಕೊಂಡನು. ಕರೀಮನ ತಂಡಕ್ಕೆ ಈ ಮೂವರನ್ನು ಕಂಡೊಡನೆ ಅಪಾಯದ ಸೂಚನೆ ಸಿಕ್ಕಿತು. ಕೈಬಿಟ್ಟರೆ ಸಾಯನ್ನಪ್ಪುತ್ತಿದ್ದರು. ಮೇಲೆ ಬಂದರೆ ಒಂದೀಟಾನೆಗೆ ಹೋಗಬೇಕಾಗುತ್ತಿತ್ತು. ಹೀಗಾಗಿ ಏನು ಮಾಡಬೇಕೆಂದು ಯೋಚಿಸದೆ ಜಾರ್ಜನು ತಾನು ಜೋತುಬಿದ್ದ ಹಗ್ಗವನ್ನು ಎಡ ಮತ್ತು ಬಲ ಬದಿಗಳಿಗೆ ಅಲ್ಲಾಡಿಸ ತೊಡಗಿದನು. ಉಳಿದ ಇಬ್ಬರೂ ಅವನ ಮಾದರಿಯನ್ನೇ ಅನುಸರಿಸಿದರು. ಇದರಿಂದ ಹಗ್ಗದಲ್ಲಿ ಕ್ರಮೇಣ ಚಲನೆಯು ಕಾಣಿಸಿಕೊಂಡಿತು. ಅದು ಬರುಬರುತ್ತ ಜೋರಾಗಿ ಸಿಂಗನ ಕಾಲುಗಳು ದೂರದ ಬಂಡೆಯೊಂದಕ್ಕೆ ತಾಗತೊಡಗಿದವು. ಈಗ ಜಾರ್ಜ್ ಈ ವಿಧಾನವನ್ನು ಏಕೆ ಅನುಸರಿಸಿದ್ದಾನೆಂದು ಉಳಿದ ಇಬ್ಬರಿಗೂ ಗೊತ್ತಾಯಿತು. ಕೊನೆಗೆ ಸಿಂಗನು ಬಂಡೆಯ ಮೇಲೆ ಬಂದಾಗ ಕೈ ಬಿಟ್ಟುಬಿಟ್ಟನು. ಇದರಿಂದ ಬಂಡೆಯ ಮೇಲೆ ಅಪ್ಪಳಿಸಿದ ಅವನ ಹಣೆಗೆ ಸ್ವಲ್ಪ ಗಾಯವಾದರೂ ಆತನು ಅಪಾಯದಿಂದ ಪಾರಾಗಿದ್ದನು. ಉಳಿದ ಇಬ್ಬರೂ ಕೂಡ ಸಿಂಗನಂತೆ ಮಾಡಿ ಬಂಡೆಯನ್ನು ಆಶ್ರಯಿಸಿ ನಿಂತುಬಿಟ್ಟರು. ಈ ಮೂವರೂ ಹಗ್ಗವನ್ನು ಕೈಬಿಡುವ ಹೊತ್ತಿಗೆ ಆ ಹಗ್ಗವು ಸಿಕ್ಕಿಹಾಕಿಕೊಂಡಿದ್ದ ಆಲದ ಮರದ ರೆಂಬೆಯನ್ನು ಚಂಡೀದಾಸನು ತಲುಪಿದ್ದ. ಆದರೆ ಆತನ ಕೈಗೆ ಬರೀ ಹಗ್ಗವು ಮಾತ್ರ ಸಿಕ್ಕಿತು. ಕರೀಮರು ಬಂಡೆಯನ್ನು ಇಳಿದು ಬೆಟ್ಟದ ಇನ್ನೊಂದು ಪಾರ್ಶ್ವದತ್ತ ಹೊರಟಿದ್ದರು. ಬಹು ಕಡಿದಾದ ಆ ಸ್ಥಳವನ್ನು ಚಂಡೀದಾಸನು ತಲುಪಲು ಸಾಧ್ಯವಿರಲಿಲ್ಲ. ಕರೀಮರು ಕೂಡ ಬಹು ಪ್ರಯಾಸದಿಂದ ಕೆಳಗೆ ಇಳಿಯಲು ಪ್ರಾರಂಭಿಸಿದ್ದರು.

ಈ ದೃಶ್ಯವನ್ನು ವೀಕ್ಷಿಸುತ್ತಿದ್ದ ಗಾಮಾನಿಗೆ ತನ್ನ ದಿವ್ಯ ದೃಷ್ಟಿಯು

ಮೂಲಕ ಕದೀಮರು ಯಾರು ಎಂಬುದು ಗೊತ್ತಾಯಿತು. ಸರಸ್ವತಿ ಮತ್ತು ನರಸಿಂಹಮೂರ್ತಿಗಳು ಮಾತ್ರ ಸಂಜೆಯಾಗುವುದನ್ನೇ ಎದುರು ನೋಡುತ್ತಾ ಕುಳಿತಿದ್ದರು. ಆಲದ ಮರದ ನೆರಳು ಸಂಜೆಯ ಹೊತ್ತಿಗೆ ಎಲ್ಲಿ ಬರುತ್ತದೆ ಎಂಬುದು ಇಬ್ಬರಿಗೂ ಜಿಜ್ಞಾಸೆಯ ಪ್ರಶ್ನೆಯಾಗಿತ್ತು.

೨೭

ಸಂಜೆಯಾಗುತ್ತಿದ್ದಂತೆ ಸರಸ್ವತಿ ಮತ್ತು ನರಸಿಂಹಮೂರ್ತಿಗಳ ಕಾತುರ ಹೆಚ್ಚಾಗತೊಡಗಿತು. ಮಧ್ಯಾಹ್ನ ಎರಡು ಗಂಟೆಯವರೆಗೆ ಮಾತ್ರ ಆಲದ ಮರದ ನೆರಳು ಸಿಗುವ ಸಾಧ್ಯತೆ ಇತ್ತು. ಅನಂತರ ಸೂರ್ಯನು ಬೆಟ್ಟದ ಹಿಂಭಾಗಕ್ಕೆ ಹೋಗಿಬಿಡುತ್ತಿದ್ದ. ನೆರಳು ಕೊನೆಯ ಸಲ ಯಾವ ಬಿಂದುವನ್ನು ಮುಟ್ಟುತ್ತದೆ ಎಂಬುದು ಕುತೂಹಲದ ಪ್ರಶ್ನೆಯಾಗಿತ್ತು. ಆ ನೆರಳನ್ನು ಕುರಿತು ಇಷ್ಟೇಕೆ ತಲೆ ಕೆಡಿಸಿಕೊಂಡಿದ್ದಾರೆ ಎಂಬುದು ಮಾತ್ರ ಪ್ರಶಾಂತ ಮತ್ತು ಇತರರಿಗೆ ಅರ್ಥವಾಗಲಿಲ್ಲ. ಕೊನೆಗೆ ನೆರಳು ಚಿಕ್ಕದಾಗುತ್ತಾ ಬಂದು ಬೆಟ್ಟದ ಕೆಳಗಿರುವ ಕೊಳ್ಳದ ಒಂದು ಬಂಡೆಯ ಮೇಲ್ಭಾಗದಲ್ಲಿ ಕೊನೆಗೊಂಡಿತು. ಸುಮಾರು ಮುನ್ನೂರು ಅಡಿಗಳ ಕೆಳಗೆ ಆ ಬಂಡೆಯಿತ್ತು. ಹೀಗಾಗಿ ನೆರಳನ್ನು ಎಲ್ಲರೂ ದೂರದರ್ಶಕದಲ್ಲಿ ಮಾತ್ರ ನೋಡಲು ಸಾಧ್ಯವಾಗುತ್ತಿತ್ತು. ಆ ಬಂಡೆಯನ್ನು ತಲುಪುವ ಹೊತ್ತಿಗೆ ಸಂಜೆಯಾಗುತ್ತದೆಂದು ಗಾಮೂನಿಗೆ ಗೊತ್ತಿತ್ತು. ಹೀಗಾಗಿ ರಾತ್ರಿ ಆ ಬಂಡೆಯ ಹತ್ತಿರವೇ ತಂಗುವುದೆಂದು ಎಲ್ಲರೂ ನಿರ್ಧರಿಸಿಕೊಂಡು ಬೆಟ್ಟವನ್ನು ಇಳಿಯಲು ಪ್ರಾರಂಭಿಸಿದರು. ಇವರ ಜಾಡನ್ನು ಹಿಡಿದು ಹೊರಟ ವೀರೇಂದ್ರ ಮತ್ತು ಸಂಗಡಿಗರು ದೂರದರ್ಶಕದಿಂದ ಇವರು ತಲುಪುವ ತಾಣವನ್ನು ಕಂಡುಹಿಡಿದು ನಂತರ ಮುಂದಿನ ಹೆಜ್ಜೆಯನ್ನು ನಿರ್ಧರಿಸಬೇಕೆಂದು ಬೆಟ್ಟದ ತುದಿಯಲ್ಲಿ ನಿಂತು ನಿರ್ಧರಿಸಿದರು.

ಬೆಟ್ಟವನ್ನು ಅರ್ಧದಷ್ಟು ಇಳಿದಾದ ಮೇಲೆ ಒಂದು ಕಡೆ ಗಾಮೂನ ತಂಡದವರು ವಿಶ್ರಮಿಸಿಕೊಂಡು ಬೆಂಕಿಯನ್ನು ಹೊತ್ತಿಸಿ ಚಹ ಮಾಡತೊಡ

ಗಿದರು. ಆ ಜಿಂಕಿಯ ನೀಳವಾದ ನೀಲಿಯ ಹೊಗೆಯು ಅಲ್ಲಿಯೇ ಸಮೀಪದಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದ ಕರ್ದಿಮರ ಕಣ್ಣಿಗೆ ಬಿತ್ತು. ನಿಂಗನನ್ನು ಆ ಸ್ಥಳಕ್ಕೆ ಅವರು ಕಳುಹಿಸಿದರು. ಅಲ್ಲಿ ನಿಂಗನು ಕೆಲಹೊತ್ತು ನಿಂತು ಅವರ ಚಲನ ವಲನವನ್ನು ವೀಕ್ಷಿಸಿದನು. ಸರಸ್ವತಿ ಮತ್ತು ಗಾಮಾರು ಈತನು ನಿಂತಿದ್ದ ಭಾಗದತ್ತ ಬರತೊಡಗಿದರು. ಕೂಡಲೇ ಈತನು ಮರವೊಂದರ ಹಿಂದೆ ಅಡಗಿ ಕೊಂಡನು. ಅವರ ಮಾತುಗಳು ಮಾತ್ರ ನಿಂಗನಿಗೆ ಸ್ಪಷ್ಟವಾಗಿ ಕೇಳುತ್ತಿದ್ದವು.

'ಆ ಬಂಡೆಯ ಹಿಂಭಾಗದಲ್ಲಿಯೇ ಗುಹೆ ಇದೆ ಎಂಬುದು ಈಗ ಖಚಿತವಾದ ಹಾಗಾಯಿತು' ಎಂದಳು ಸರಸ್ವತಿ.

'ರಾತ್ರಿಯ ಹೊತ್ತು ಆ ಬಂಡೆಯನ್ನು ಸರಿಸಿ ನಾವು ಒಳಹೋಗ ಬಹುದೆ, ?' ಎಂದು ಕೇಳಿದ ಗಾಮಾ.

'ಅದೇ ಸರಿಯಾದ ಯೋಚನೆ ಎಂದು ಕಾಣುತ್ತದೆ. ರಾತ್ರಿ ಎಲ್ಲರೂ ಮಲಗಿದ ಮೇಲೆ ನಾವು ಬಂಡೆಯನ್ನು ಪರೀಕ್ಷಿಸಬೇಕು. ಆದರೆ ಆ ಕೆಲಸ ವನ್ನು ನಾಳೆ ಪ್ರಾರಂಭಿಸುವುದೆಂದು ಸುಳ್ಳು ಹೇಳಬೇಕು' ಅವಳ ಈ ಮಾತಿಗೆ ಗಾಮಾನು ಸಮ್ಮತಿಸಿದ. ನಂತರ ಅವರು ನಿಂಗನಿಂದ ಮಾತನಾಡುತ್ತಾ ದೂರ ಹೋದರು.

ನಿಂಗನು ಉಳಿದ ಇಬ್ಬರಿಗೆ ತಾನು ಕೇಳಿಸಿಕೊಂಡಿದ್ದನ್ನು ತಿಳಿಸಿದ. ಈಗ ಗಾಮಾನ ತಂಡವನ್ನು ಅನುಸರಿಸಿಕೊಂಡು ಹೋಗುವುದು ಮಾತ್ರ ಅವರಿಗೆ ಬೇಕಿತ್ತು. ಅದರಿಂದ ನಿರಾಳವಾಗಿ ಅವರು ಗುಹೆಯನ್ನು ಪತ್ತೆ ಹಚ್ಚಿದಂತಾಗುತ್ತಿತ್ತು. ಆ ದಿನ ರಾತ್ರಿ ಹೇಗಿದ್ದರೂ ಗಾಮಾ ಆ ಬಂಡೆಗಳನ್ನು ಸರಿಸುತ್ತಾನೆ. ಆಗ ಆತನನ್ನು ಮುಗಿಸಿ ತಾವು ಗುಹೆಯನ್ನು ಪ್ರವೇಶಿಸುವು ದೆಂದು ಅವರು ತಮ್ಮಲ್ಲಿಯೇ ನಿರ್ಧರಿಸಿಕೊಂಡರು.

ಗಾಮಾನ ತಂಡದವರು ಆ ಬಂಡೆಗಳನ್ನು ತಲುಪಿದಾಗ ಸಂಜೆಯ ಏಳು ಗಂಟೆಯಾಗಿತ್ತು. ನೆರಳಿನ ವಿಷಯ ತನಗೊಬ್ಬನಿಗೆ ಗೊತ್ತಿದೆ ಎಂದು ಕೊಂಡಿದ್ದ ನರಸಿಂಹಮೂರ್ತಿಗಳು ಆ ವಿಷಯವು ಗಾಮಾನಿಗೂ ಗೊತ್ತಿತ್ತು ಎಂಬುದು ತಿಳಿದ ಮೇಲೆ ಭಯದಿಂದಲೇ ಬೆಟ್ಟವನ್ನು ಇಳಿದಿದ್ದರು.

'ಈಗ ಕತ್ತಲಾಯಿತು. ನಾಳೆ ಬಂಡೆಯನ್ನು ಸರಿಸೋಣ' ಎಂದ ಗಾಮಾ. ಆತನ ಮಾತಿಗೆ ಉಳಿದವರು ಸಮ್ಮತಿಸಿದರು.

ರಾತ್ರಿಯು ನಿಧಾನವಾಗಿ ಸರಿಯುತ್ತಿತ್ತು. ವೀರೇಂದ್ರನ ತಂಡದವರಿಗೆ ಏನು ಮಾಡಬೇಕೆಂದು ತೋಚಲಿಲ್ಲ. ಬೆಟ್ಟದ ಮೇಲಿದ್ದ ಅವರಿಗೆ ಕಣಿವೆಯು ಆಳದಲ್ಲಿ ಎರಡು ಕಡೆ ಬೆಂಕಿಯು ಕಾಣಿಸುತ್ತಿತ್ತು. ಒಂದು ಗಾಮಾನ ತಂಡದವರಾಗಿದ್ದರೆ ಇನ್ನೊಂದು ಕರೀಮರ ಬೆಂಕಿಯಾಗಿತ್ತು. 'ಲೋಕ ಕರ್ತೃ'ರ ನಾಯಕನು ಸಹಾಯವನ್ನು ಕಳುಹಿಸುವುದಾಗಿ ಮಾತ್ರ ಸೂಚಿಸಿದ್ದ. ಆದರೆ ಸಹಾಯವು ಯಾವಾಗ ಮತ್ತು ಯಾವ ರೂಪದಲ್ಲಿ ದೊರೆಯುತ್ತದೆ ಎಂದು ಇವರಿಗೆ ಗೊತ್ತಿರಲಿಲ್ಲ.

ರಾತ್ರಿಯು ಕಣಿವೆಯಲ್ಲಿಯ ತಂಡದವರಿಗೆ ನಿಗೂಢವಾಗುತ್ತಲೇ ಹೋಯಿತು. ಎಲ್ಲರೂ ಕಣ್ಣು ಮುಚ್ಚಿದವರಂತೆ ಮಲಗಿದ್ದರು. ಆದರೆ ಎಲ್ಲರ ಮನಸ್ಸಿನ ಕಣ್ಣು ತೆರೆದೇ ಇತ್ತು. ರಾತ್ರಿ ಎಲ್ಲರಿಗೂ ನಿದ್ರೆ ಹತ್ತಿದೊಡನೆ ನಿಧಾನಕ್ಕೆ ಎದ್ದು ಬಂಡೆಯನ್ನು ಪರೀಕ್ಷಿಸಬೇಕೆಂದು ನರಸಿಂಹಮೂರ್ತಿಗಳು ಯೋಚಿಸಿದ್ದರು. ಇದೇ ಯೋಚನೆಯು ಗಾಮಾ ಮತ್ತು ಸರಸ್ವತಿಯರದೂ ಆಗಿತ್ತು. ಕರೀಮರು ಮಾತ್ರ ಆ ರಾತ್ರಿ ಚೆನ್ನಾಗಿ ಕುಡಿದು ಊಟ ಮಾಡಿದರು. ಅವರಿಗೆ ಆ ರಾತ್ರಿ ಭಯಾನಕ ರಾತ್ರಿ ಎಂದು ಗೊತ್ತಿತ್ತು. ಗಾಮಾ ಮತ್ತು ಸರಸ್ವತಿಯು ಮಾತುಗಳನ್ನು ಕದ್ದು ಕೇಳಿದ್ದ ನಿಂಗನ ಮೂಲಕ ರಾತ್ರಿಯ ಹೊತ್ತು ಅವರು ಬಂಡೆಯ ಬಳಿ ಬರುತ್ತಾರೆಂದು ಇವರಿಗೆ ಗೊತ್ತಾಗಿತ್ತು. ಹೀಗಾಗಿ ಆ ರಾತ್ರಿ ಇವರ ಕೈಯಲ್ಲಿ ಒಂದೆರಡು ಕೊಲೆಗಳು ಸಂಭವಿಸಬಹುದಾದ ಸಾಧ್ಯತೆಗಳನ್ನು ಇವರು ನಿರೀಕ್ಷಿಸಿದ್ದರು. ರಾತ್ರಿಯ ಹೊತ್ತು ನಿಂಗನು ತನ್ನ ಚಾಕುವನ್ನು ಸಿದ್ಧಪಡಿಸಿಕೊಂಡನು. ಜಾರ್ಜನು ತನ್ನ ರಿವಾಲ್ವರಿನ ಗುಂಡುಗಳನ್ನು ಸರಿಪಡಿಸಿಕೊಂಡು ಒಂದು ಸಲ ಮಂಡಿಯೂರಿ ಕುಳಿತು ಪ್ರಾರ್ಥನೆಯನ್ನು ಹೇಳಿದನು. ಒಂದು ಮರದ ಕೋಲಿಗೆ ತುದಿಯಲ್ಲಿ ಕಬ್ಬಿಣದ ತುಂಡುಗಳನ್ನು ಕಟ್ಟಿ ಅದಕ್ಕೆ ಬಟ್ಟೆಯನ್ನು ಸುತ್ತಿ ಕಣ್ಣನ್ ತನ್ನ ಆಯುಧವನ್ನು ಸಿದ್ಧಪಡಿಸಿಕೊಂಡನು.

ಪ್ರಶಾಂತ ಮತ್ತು ಚಂಡೀದಾಸರು ಬಂಡೆಯಿಂದ ಸ್ವಲ್ಪ ದೂರದಲ್ಲಿ ದೀರ್ಘವಾದ ಆಲೋಚನೆಯಲ್ಲಿ ತೊಡಗಿದರು. ಗುಂಡಪ್ಪ ಮತ್ತು ರೀಟಾ ಅವರ ಮಾತನ್ನು ಕೇಳಿಸಿಕೊಳ್ಳುತ್ತಿದ್ದರೂ ತಮ್ಮ ಕಣ್ಣುಗಳ ಮೂಲಕ ಸುತ್ತಲೂ ಕಾವಲನ್ನು ಇಟ್ಟಿದ್ದರು. ಚಂಡೀದಾಸನು ಸಿ ಐ.ಡಿ. ವಿಭಾಗಕ್ಕೆ

ಸೇರಿದವನಾಗಿದ್ದರೂ ಗಾಮಾನನ್ನು ಬಂಧಿಸುವಂಥ ಒಂದೂ ಅನುಭವ ಇರಲಿಲ್ಲ. ಪ್ರಶಾಂತನು ತನ್ನ ಯೋಜನೆಯನ್ನು ಮುಂದಿಟ್ಟ, 'ನಾವು ಈ ರಾತ್ರಿ ಸರಸ್ವತಿಯನ್ನು ಅಪಹರಿಸಬೇಕು. ಅವಳನ್ನು ಇಲ್ಲಿಯೇ ಎಲ್ಲಿ ಯಾದರೂ ಬಚ್ಚಿಟ್ಟು ನಾವು ಮಾತ್ರ ಗಾಮಾನೊಡನೆ ಉಳಿಯಬೇಕು. ಗಾಮಾನಿಂದ ಅಪಾಯವು ಕಂಡೊಡನೆ ನಾವು ಅವಳ ಪ್ರಾಣಭಯವನ್ನು ಗಾಮಾನ ಮುಂದಿರಿಸಿ ಪಾರಾಗಲು ಪ್ರಯತ್ನಿಸಬೇಕು'. ಇದಕ್ಕೆ ಉತ್ತರವಾಗಿ ರೀಟಾ ಹೇಳಿದಳು, 'ನೀವು ಹೇಳುವ ವಿಷಯ ಸರಿಯಾಗಿಯೇ ಇದೆ ಸಾರ್. ಆದರೆ ನಾವು ಇಲ್ಲಿಂದ ಪಾರಾಗಿ ಹೋಗುವುದೇ ಮುಖ್ಯ ವಿಷಯವೇ ಎಂಬುದು ನಮ್ಮೆಲ್ಲರ ಮುಂದೆ ಇರುವ ಪ್ರಶ್ನೆ. ಇಷ್ಟು ಕಷ್ಟಪಟ್ಟು ಈ ಕಣಿವೆಯ ಆಳದವರೆಗೆ ಈ ಅನ್ಯಲೋಕ ಜೀವಿಯೊಡನೆ ಬಂದು ಈಗ ಆ ಹೆಂಗಸೊಬ್ಬಳನ್ನು ಒತ್ತೆಯಾಳಾಗಿಟ್ಟುಕೊಂಡು ನಾವು ಪಾರಾಗಿ ಹೋಗು ವುದು ನನಗೆ ಇಷ್ಟವಾಗುತ್ತಿಲ್ಲ. ಇಲ್ಲಿ ಇನ್ನೂ ಹೊಸ ಅನುಭವಗಳು ನಮಗಾಗಿ ಕಾದಿವೆ ಎಂದು ನನಗೆ ತೋರುತ್ತಿದೆ.'. ಗುಂಡಪ್ಪನು ಅವಳ ಮಾತನ್ನು ಕೇಳಿ ತಲೆದೂಗುತ್ತಾ ಹೇಳಿದನು, 'ಹೌದು ಸಾರ್, ಬಹಳ ಶೂರತನದ, ಹೊಡೆದಾಟದ ಪ್ರಸಂಗವನ್ನು ಎದುರು ನೋಡುತ್ತಿರುವಾಗ ಈಗ ಇಲ್ಲಿಂದ ಹೊರಟುಹೋಗುವುದು ಸರಿಯಲ್ಲ ಎನ್ನಿಸುತ್ತಿದೆ'. ಆತನ ಮಾತಿನ ನಂತರ ಚಂಡೀದಾಸನು ಹೇಳಿದನು. 'ನನಗೆ ಅನುಭವಗಳು ಮುಖ್ಯವಲ್ಲ. ಮೂವರು ಕದೀಮರು ಜೇರೆ ಗಂಟು ಬಿದ್ದಿದ್ದಾರೆ. ಮೇಲಾಗಿ ಈ ಗಾಮಾನ ರಹಸ್ಯವನ್ನು ಭೇದಿಸಬೇಕು. ಆತನು ನರಸಿಂಹಮೂರ್ತಿಗಳನ್ನು ಅಪಹರಿಸುವ ಮೂಲಕ ಅಪರಾಧಿಯ ಸ್ಥಾನದಲ್ಲಿ ಜೇರೆ ನಿಂತಿದ್ದಾನೆ. ಕದೀಮರನ್ನು, ಗಾಮಾನನ್ನು ಬಂಧಿಸುವುದು ಕಾನೂನಿನ ದೃಷ್ಟಿಯಲ್ಲಿ ನನ್ನ ಪ್ರಥಮ ಕರ್ತವ್ಯ. ಈ ಬಂಡೆಯನ್ನು ಸರಿಸಿದ ನಂತರ ಅಲ್ಲಿ ನಿಧಿ ಇರುವುದೇ ನಿಜವಾದರೆ ಆ ನಿಧಿಯು ಸರಕಾರಕ್ಕೆ ಸೇರಬೇಕಾದದ್ದು. ಹೀಗಾಗಿ ಅದರ ರಕ್ಷಣೆಯ ಹೊಣೆಯೂ ನನ್ನ ಮೇಲೆಯೇ ಇದೆ'. 'ಅಂದರೆ ಬಂಡೆಯನ್ನು ಸರಿಸುವವರೆಗೆ ನೀವು ಇಲ್ಲಿಂದ ಕದಲುವುದು ಸಾಧ್ಯವಿಲ್ಲವೆಂದ ಹಾಗಾಯಿತು' ಎಂದನು ಪ್ರಶಾಂತ. 'ಹೌದು' ಎಂದು ಚಂಡೀದಾಸ ಉತ್ತರಿಸಿದ. ಈ ಮಾತು ಮುಗಿದ ನಂತರ ಪ್ರಶಾಂತನು ರೀಟಾ ಮತ್ತು ಗುಂಡಪ್ಪನವನೊಡನೆ

ಇನ್ನೊಂದು ತಾಣದಲ್ಲಿ ಮಂತ್ರಾಲೋಚನೆಯಲ್ಲಿ ತೊಡಗಿದನು. ' ಚಂಡೀದಾಸನು ಹೇಳುವುದೇನೋ ಸರಿ. ಆದರೆ ಅಪಾಯ ಬಂದರೆ ನಮ್ಮ ರಕ್ಷಣೆಗೆ ನಾವು ಏನಾದರೂ ಕ್ರಮವನ್ನು ಕೈಗೊಳ್ಳಬೇಕು ' ಎಂದ ಪ್ರಶಾಂತ.

' ಆದರೆ ಸರಸ್ವತಿಯನ್ನು ಬಂಧಿಸುವುದು ಮಾತ್ರ ನನಗೆ ಇಷ್ಟವಿಲ್ಲ ' ಎಂದು ರೀಟಾ ಖಂಡತುಂಡವಾಗಿ ಹೇಳಿದಳು.

' ಎಷ್ಟೆಂದರೂ ಹೆಂಗಸರು ಕೊನೆಗೆ ಒಂದಾಗ ಬಿಡುತ್ತಾರೆ ' ಎಂದು ಗುಂಡಪ್ಪ ಅವಳನ್ನು ಚಾಡಾಯಿಸಿದ.

' ಈ ರಾತ್ರಿ ಏನೋ ಘಟನೆಗಳು ನಡೆಯುತ್ತವೆ ಎಂದು ನನ್ನ ಮನಸ್ಸಿಗೆ ಅನಿಸಿದೆ. ಆ ಘಟನೆಗಳು ನಡೆದ ಮೇಲೆ ಏನು ಮಾಡುವುದೆಂದು ನಿರ್ಧರಿಸೋಣ ' ಎಂದ ಪ್ರಶಾಂತ. ಇದಕ್ಕೆ ಉಳಿದ ಇಬ್ಬರೂ ಸಮ್ಮತಿಸಿದರು. ರಾತ್ರಿ ಇಡೀ ಎಚ್ಚರವಿರಬೇಕೆಂದು ಮೂವರೂ ತಮ್ಮಲ್ಲಿಯೇ ನಿರ್ಧರಿಸಿಕೊಂಡರು. ಈ ವಿಷಯವನ್ನು ಚಂಡೀದಾಸನಿಗೆ ತಿಳಿಸಿದಾಗ ಆತನೂ ಕೂಡ ಹೆಚ್ಚೂ ಕಡಿಮೆ ಇದೇ ನಿರ್ಧಾರಕ್ಕೆ ಬಂದಿದ್ದ.

ರಾತ್ರಿ ಸುಮಾರು ಹನ್ನೆರಡು ಗಂಟೆಯ ಹೊತ್ತಿಗೆ ಕದೀಮರು ನಿಧಾನವಾಗಿ ಬಂಡೆಯನ್ನು ಸಮೀಪಿಸಿ ಅದರ ಹಿಂಭಾಗದಲ್ಲಿ ಅಡಗಿ ಕುಳಿತರು. ಸ್ವಲ್ಪ ಸಮಯದ ನಂತರ ಇನ್ನೊಂದು ಆಕೃತಿಯು ಕತ್ತಲಲ್ಲಿ ನಡೆಯುತ್ತಾ ಬಂದು ಬಂಡೆಯ ಬಲ ಪಾರ್ಶ್ವದಲ್ಲಿ ಅಡಗಿ ಕುಳಿತುಕೊಳ್ಳುವುದನ್ನು ಅವರು ಕಂಡರು. ಇದಾದ ಕೆಲಸಮಯದ ನಂತರ ಆ ವ್ಯಕ್ತಿಯು ಬಂಡೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸತೊಡಗಿತು. ಅಷ್ಟು ದೊಡ್ಡ ಬಂಡೆಯನ್ನು ಒಂದೇ ವ್ಯಕ್ತಿ ಸರಿಸುವುದು ಅಸಾಧ್ಯವಾದ ಮಾತಾಗಿತ್ತು. ಇಷ್ಟರಲ್ಲಿ ಸರಸ್ವತಿಯು ಬಂಡೆಯ ಬಳಿ ನಿಧಾನಕ್ಕೆ ಬಂದಳು. ಅವಳನ್ನು ದೂರದಿಂದಲೇ ನೋಡಿದ ನರಸಿಂಹಮೂರ್ತಿಗಳು ಮತ್ತೆ ಬಲಭಾಗಕ್ಕೆ ಸರಿದು ಅಡಗಿ ನಿಂತರು. ಅವಳೊಡನೆ ಅದೃಶ್ಯರೂಪದಲ್ಲಿ ಗಾಮಾ ಇದ್ದಾನೆಂದು ಕದೀಮರಿಗೆ ಗೊತ್ತಿರಲಿಲ್ಲ. ಸರಸ್ವತಿಯು ಬಂಡೆಯನ್ನು ಕೆಳಭಾಗದ ಒಂದು ಕಿಂಡಿಯ ಮೂಲಕ ಸರಿಸಲು ಪ್ರಾರಂಭಿಸಿದಳು. ಅವಳು ಒಬ್ಬಳೇ ಇದ್ದಾಳೆಂದು ಭಾವಿಸಿದ್ದ ಕದೀಮರಿಗೆ ಇದರಿಂದ ಆಶ್ಚರ್ಯವಾಯಿತು. ಆದರೆ ಗಾಮಾನ ಅದೃಶ್ಯ ಶಕ್ತಿಯು ಸರಸ್ವತಿಯೊಡನೆ ಕೆಲಸಕ್ಕೆ ಇಳಿದಿತ್ತು. ಬಂಡೆಯು ಸರಿಯುತ್ತಿದೆ

ಎಂದು ಗೊತ್ತಾದೊಡನೆ ಬಂಡೆಯ ಮೇಲ್ಬದಿಗೆ ಕದೀಮರು ತೆವಳುತ್ತಾ ಬಂದರೆ ಬಂಡೆಯಿಂದ ಸ್ವಲ್ಪ ದೂರದಲ್ಲಿ ಚಂಡೀದಾಸ ಮತ್ತು ಪ್ರಶಾಂತರು ಬಂದು ನಿಂತರು. ರೀಟಾ ಮತ್ತು ಗುಂಡಪ್ಪ ಕ್ಷಣಾರ್ಧದಲ್ಲಿ ಬಂಡೆಯ ಹಿಂಭಾಗವನ್ನು ಸೇರಿಸ್ದರು. ಕದೀಮರಿಗೆ ಹಿಂದೆ ಮುಂದೆ ತಮ್ಮ ವೈರಿ ಇದ್ದಾನೆಂದು ಗೊತ್ತಾಗಲಿಲ್ಲ. ಸರಿದ ಬಂಡೆಯ ಕೊಂಚ ಸ್ಥಳದ ಮೂಲಕ ಒಳಗೆ ಪ್ರವೇಶಿಸಲು ನರಸಿಂಹಮೂರ್ತಿಗಳು ಯತ್ನಿಸುತ್ತಿದ್ದರು. ನಿಂಗನು ಕೂಡಲೇ ಬಂಡೆಯಿಂದ ಕೆಳಗೆ ಜಿಗಿದು ನರಸಿಂಹಮೂರ್ತಿಗಳನ್ನು ಹೊರಗೆ ಎಳೆದು ತಾನು ಗುಹೆಯನ್ನು ಪ್ರವೇಶಿಸಲು ಪ್ರಯತ್ನಿಸತೊಡಗಿದನು. ಒಬ್ಬ ಮನುಷ್ಯನಿಗೆ ಒಳಪ್ರವೇಶಿಸಲು ಸಾಧ್ಯವಾಗದಂತಹ ಸ್ಥಿತಿಯು ಇದ್ದರೂ ನಿಧಿಗಾಗಿ ಯೂನಿವರ್ಸಿಟಿಯ ಒಬ್ಬ ವೃದ್ಧ ಅಧ್ಯಾಪಕನಿಗೂ ಮತ್ತು ಕದೀಮನೊಬ್ಬನಿಗೂ ನಡೆದ ಆ ಕಿತ್ತಾಟವು 'ಹಣವೆಂದರೆ ಹೆಣವೂ ಎದ್ದು ಕೂಡುತ್ತದೆ' ಎಂಬ ನುಡಿಯನ್ನು ನಿಜವಾಗಿಸುವಂತೆ ತೋರುತ್ತಿತ್ತು. ನರಸಿಂಹಮೂರ್ತಿಗಳನ್ನು ಹಿಂದೆ ಎಳೆದು ನಿಂಗನು ಬಂಡೆಯ ಸಂಧಿಯಿಂದ ನುಸುಳಲು ಪ್ರಯತ್ನಿಸುತ್ತಿದ್ದಂತೆ ಗುಂಡಪ್ಪನು ಬಂಡೆಯ ಮೇಲ್ಬದಿಯಿಂದ ಆತನ ಮೇಲೆ ಹಾರಿದನು. ಈಗ ಗುಂಡಪ್ಪ ಮತ್ತು ನಿಂಗ ಇಬ್ಬರೂ ನೆಲದ ಮೇಲೆ ಬಿದ್ದು ಮಲ್ಲಯುದ್ಧದಲ್ಲಿ ತೊಡಗಿದರು. ಬಂಡೆಯ ಮೇಲ್ಭಾಗದಲ್ಲಿ ಕದೀಮರು ಇದ್ದಾರೆಂದು ತಿಳಿದೊಡನೆ ಪ್ರಶಾಂತ, ಚಂಡೀದಾಸ ಮತ್ತು ಶಿವಾಜಿಯರು ಬದಿಗೆ ಕೂಡಲೇ ಧಾವಿಸಿದರು. ಮಧ್ಯ ನಿಂಗನ ಶಕ್ತಿ ಪ್ರಯೋಗದಿಂದ ನಿರುಪಾಯರಾಗಿ ನೆಲದ ಮೇಲೆ ಬಿದ್ದಿದ್ದ ನರಸಿಂಹಮೂರ್ತಿಗಳು, 'ನಾನು ತಿಮ್ಮಾಭಟ್ಟನ ಮೊಮ್ಮಗ. ನಿಧಿಯು ಕಾನೂನಿನ ಪ್ರಕಾರ ನನಗೇ ಸೇರಬೇಕಾದದ್ದು' ಎಂದು ಪ್ರಾಣಭಯದಿಂದ ಮತ್ತು ಪ್ರಾಣ ಸಂಕಟದಿಂದ ಎಂಬಂತೆಯೋ ಎದೆಎದೆ ಬಡಿದುಕೊಂಡು ಅರಚುತ್ತಿದ್ದರು. ಜಾರ್ಜನನ್ನು ಕಾಲಿನಿಂದ ಹಿಡಿದು ಶಿವಾಜಿ ಮತ್ತು ಚಂಡೀದಾಸರು ಕೆಳಗೆ ಜಗ್ಗಿದರು. ಇಳಿಜಾರಾಗಿದ್ದ ಬಂಡೆಯ ಮೇಲಿಂದ ಜಾರ್ಜನು ದೊಪ್ಪನೆ ನೆಲಕ್ಕೆ ಬಿದ್ದನು. ಆತನ ಕೈಯಲ್ಲಿಯ ರಿವಾಲ್ವರು ಮಾತ್ರ ಅಲ್ಲಿಯೇ ಇತ್ತು. ಕೆಳಗೆ ಬಿದ್ದ ಜಾರ್ಜನು ತಕ್ಷಣವೇ ಎದ್ದು ನಿಂತು ರಿವಾಲ್ವರಿನ ಕುದುರೆಯನ್ನು ಅದುಮಿದನು. ಗುಂಡು ಶಿವಾಜಿಯ ಬಲತೋಳನ್ನು ಭೇದಿಸಿಕೊಂಡು ಹೋಗಿ

ಬಿಟ್ಟಿತು. ಚಂಡೀದಾಸನು ಕೂಡಲೇ ಜಾರ್ಜನ ಬಲಗೈಯತ್ತ ಧಾವಿಸಿ ರಿವಾಲ್ವರನ್ನು ಕಿತ್ತುಕೊಳ್ಳಬೇಕು ಎನ್ನುವಷ್ಟರಲ್ಲಿ ರೀಟಾ ಜಾರ್ಜನ ಹಿಂಬದಿಯಿಂದ ಬಂದು ಆತನ ಕಾಲುಗಳನ್ನು ಹಿಡಿದು ಎಳೆದಳು. ಜಾರ್ಜನು ನೆಲಕ್ಕೆ ಮುಖವನ್ನು ಮಾಡಿಕೊಂಡು ಬಿದ್ದುಬಿಟ್ಟನು. ಈಗ ಚಂಡೀದಾಸನು ಜಾರ್ಜನ ಮೇಲೆ ಮುಗಿಬಿದ್ದನು. ರೀಟಾಳು ಶಿವಾಜಿಯ ಸಹಾಯಕ್ಕೆ ಧಾವಿಸಿದಳು. ಕಣ್ಣನ್‌ನು ತನ್ನ ಕೈಯಲ್ಲಿಯ ಕೋಲನ್ನು ಪ್ರಶಾಂತನೆಡೆಗೆ ಬೀಸುತ್ತಿದ್ದನು. ಈ ಕಲೆಯಲ್ಲಿ ಆತನು ನಿಷ್ಣಾತನಾದುದರಿಂದ ಒಂದು ಏಟು ಬಿದ್ದರೂ ಪ್ರಶಾಂತ ಮೂರ್ಛೆ ಹೋಗುವ ಸಂಭವವಿತ್ತು. ಹೀಗಾಗಿ ಪ್ರಶಾಂತನು ಉಪಾಯದಿಂದ ಆ ಬೀಸುವ ದೊಣ್ಣೆಯಿಂದ ತಪ್ಪಿಸಿಕೊಳ್ಳುತ್ತಿದ್ದನು. ಕೊನೆಗೆ ಬಂಡೆಯ ತುದಿಗೆ ಕಣ್ಣನ್ ಬಂದೊಡನೆ ಬೀಸುತ್ತಿದ್ದ ದೊಣ್ಣೆಯಿಂದ ತಪ್ಪಿಸಿಕೊಂಡು ಪ್ರಶಾಂತನು ತನ್ನ ಕಾಲುಗಳನ್ನು ಮುಂದೆ ಮಾಡಿ ವೈರಿಯತ್ತ ಜಿಗಿದನು. ಆತನ ಕಾಲಿನ ಬೂಟಿನ ಏಟುಗಳು ಕಣ್ಣನ್‌ನ ಎದೆಗೆ ಬಿದ್ದೊಡನೆ ಅವನು ಬಂಡೆಯಿಂದ ಕೆಳಗೆ ಉರುಳಿದನು. ಬಂಡೆಯ ಮೇಲಿಂದ ಹಾಗೆಯೇ ಪ್ರಶಾಂತನು ನೆಲದಮೇಲೆ ಬಿದ್ದಿದ್ದ ಕಣ್ಣನ್‌ನ ಮೇಲೆ ನೇರವಾಗಿ ಬಂದು ಕುಳಿತುಕೊಂಡನು. ತಳವಾರ ನಿಂಗನು ಬಾಲ್ಯದಿಂದ ಕುಸ್ತಿಯಲ್ಲಿ ತರಬೇತಿಯನ್ನು ಪಡೆದವನಾಗಿದ್ದ. ಆದರೆ ಗುಂಡಪ್ಪನೂ ಆ ಕಲೆಯಲ್ಲಿ ಅಷ್ಟೇ ನಿಷ್ಣಾತನಾದುದರಿಂದ ಕುಸ್ತಿಯು ಕೆಲ ಸಮಯದವರೆಗೆ ಕಲೆಯ ಮಟ್ಟದಲ್ಲಿಯೇ ನಡೆಯಿತು. ಆದರೆ ನಿಂಗನು ಪಳಪಳ ಹೊಳೆಯುತ್ತಿದ್ದ ಚಾಕುವನ್ನು ಹೊರ ತೆಗೆದೊಡನೆ ಗುಂಡಪ್ಪನಿಗೆ ಪ್ರಾಣಾಪಾಯದ ಅರಿವು ಉಂಟಾಯಿತು. ಈಗ ತನ್ನ ಸಹಾಯಕ್ಕೆ ಬರಲು ಯಾರಿಗೂ ಬಿಡುವಿಲ್ಲ ಎಂಬುದನ್ನು ಗುಂಡಪ್ಪ ಅರಿತಿದ್ದ. ಸೇಡು ತೀರಿಸಿಕೊಳ್ಳಲು ಕಾತುರನಾಗಿದ್ದ ಕೊಲೆಗಡುಕ ನಿಂಗನು, 'ನನ್ನ ಕೈಗೆ ಚಾಕು ಎಸೆದ ಗಂಡಸಲ್ಲವೇ ನೀನು ! ಈಗ ನನ್ನ ಕೈಚಳಕ ತೋರಿಸ್ತೀನಿ ನಿನಗೆ' ಎಂದವನೇ ಹಿರಿದ ಚಾಕುವನ್ನು ಮುಂದೆ ಮಾಡಿಕೊಂಡು ಗುಂಡಪ್ಪನತ್ತ ನುಗ್ಗಿದ. ಕುಡಿದ ಗೂಳಿಯಂತೆ ಬರುತ್ತಿದ್ದ ನಿಂಗನಿಂದ ತಪ್ಪಿಸಿಕೊಳ್ಳಲು ಗುಂಡಪ್ಪನು ಹಿಂದೆ ಹಿಂದೆ ಸರಿಯುತ್ತ ನಡೆದನು. ಅಲ್ಲಿ ಪೊದೆಗಳು ಗುತ್ತವಾಗಿ ಬೆಳೆದಿದ್ದವು ಮತ್ತು ಮರಗಳು ಇದ್ದವು. ಗುಂಡಪ್ಪನು ಮರಗಳ ಬೊಡ್ಡೆಗಳು

ತನ್ನ ಮತ್ತು ನಿಂಗನ ನಡುವೆ ಬರುವಂತೆ ಕಾದಾಟವನ್ನು ಯೋಚಿಸುತ್ತಾ ನಡೆದ. ಕೊನೆಗೆ ಗುಂಡಪ್ಪನನ್ನು ಇರಿಯುವ ಭರದಲ್ಲಿ ನಿಂಗನ ಚಾಕುವು ಮರವೊಂದಕ್ಕೆ ಸಿಕ್ಕಿಹಾಕಿಕೊಂಡಿತು. ಇದೇ ಸರಿಯಾದ ಸಮಯವೆಂದು ಅರಿತ ಗುಂಡಪ್ಪನು ನಿಂಗನ ಕೈಗೆ ಬಲವಾದ ಏಟನ್ನು ಕೊಟ್ಟು ಚಾಕುವಿನಿಂದ ಆತನ ಕೈಯನ್ನು ಬಿಡಿಸಿಬಿಟ್ಟನು. ಈಗ ಚಾಕುವು ಗುಂಡಪ್ಪನ ಕೈಯಲ್ಲಿತ್ತು. ಚಾಕುವನ್ನು ಎಸೆದು ಮಲ್ಲಯುದ್ಧದಿಂದ ನಿಂಗನನ್ನು ಬಂಧಿಸಬೇಕೆಂದು ಯೋಚಿಸುತ್ತ ಚಾಕುವನ್ನು ಹಿಡಿದು ನಿಂತಿದ್ದ ಗುಂಡಪ್ಪನಮೇಲೆ ನಿಂಗನು ಎಗರಿಬಿಟ್ಟನು. ಇಬ್ಬರೂ ಪೊದೆಗಳಲ್ಲಿ ಬಿದ್ದರು. ಕೆಲವು ನಿಮಿಷ ಅವರ ಹೋರಾಟದಿಂದ ಪೊದೆಗಳು ಅಲ್ಲೋಲಕಲ್ಲೋಲವಾದವು. ನಂತರ ನಿಂಗನು ಆರ್ತನಾಗಿ 'ಅಯ್ಯೋ ಸತ್ತೆ' ಎಂದು ಕಿರುಚಿದನು. ಗುಂಡಪ್ಪನ ಚಾಕುವು ನಿಂಗನ ಎದೆಯನ್ನು ಅನಿವಾರ್ಯವಾಗಿ ಛೇದಿಸಿಬಿಟ್ಟಿತ್ತು. ದಣಿದ ಗುಂಡಪ್ಪನು ನಿಧಾನವಾಗಿ ರಕ್ತದ ಮಡುವಿನಲ್ಲಿ ಬಿದ್ದ ನಿಂಗನ ದೇಹವನ್ನು ಬಿಟ್ಟು ಮೇಲೆದ್ದನು. ನಿಂಗನ ಈ ಆರ್ತ ಕಿರುಚುವಿಕೆಯನ್ನು ಕೇಳಿ ಏನು ನಡೆದಿರಬಹುದೆಂಬುದನ್ನು ಜಾರ್ಜ್ ಮತ್ತು ಕಣ್ಣನ್ ಊಹಿಸಿದರು. ಚಂಡೀದಾಸನನ್ನು ಒದೆದು ಜಾರ್ಜನು ನಿಂಗನು ಬಿದ್ದ ಪೊದೆಯತ್ತ ಧಾವಿಸಿದನು. ಹಾಗೆ ಹೋಗುವಾಗ ನೆಲದ ಮೇಲೆ ಬಿದ್ದಿದ್ದ ತನ್ನ ರಿವಾಲ್ವರನ್ನು ಮಿಂಚಿನ ವೇಗದಲ್ಲಿ ಆತನು ಎತ್ತಿಕೊಂಡಿದ್ದನು. ರಕ್ತದ ಮಡುವಿನಲ್ಲಿ ಬಿದ್ದ ಸ್ನೇಹಿತನ ದೇಹವನ್ನು ಕಂಡೊಡನೆ ಜಾರ್ಜನ ಮುಖವು ಸಿಟ್ಟಿನಿಂದ ವಿಕಾರವಾಗತೊಡಗಿತು. ಇಷ್ಟು ಹೊತ್ತಿಗೆ ಮನುಷ್ಯ ರೂಪವನ್ನು ತಾಳಿದ ಗಾಮಾನು ಸ್ವಲ್ಪ ದೂರದಲ್ಲಿ ಸರಸ್ವತಿಯೊಡನೆ ನಿಂತು ಈ ದೃಶ್ಯವನ್ನು ನೋಡುತ್ತಿದ್ದನು. ಜಾರ್ಜನು ಕೂಡಲೇ ಆ ಕಡೆ ಧಾವಿಸಿ ಸರಸ್ವತಿಯನ್ನು ತನ್ನೆಡೆ ಎಳೆದುಕೊಂಡು ಅವಳ ತಲೆಗೆ ತನ್ನ ಕೈಯಲ್ಲಿದ್ದ ರಿವಾಲ್ವರನ್ನು ನೆಟ್ಟು ಕಿರುಚಿದನು, 'ಯಾರಾದರೂ ಒಂದು ಹೆಜ್ಜೆ ಮುಂದಿಟ್ಟರೆ ಇವಳ ತಲೆ ಸಿಡಿದು ಹೋಗುತ್ತದೆ. ಬಾ ಕಣ್ಣನ್'. ಪ್ರಶಾಂತನಿಂದ ಕೊಸರಿಕೊಂಡು ಕಣ್ಣನ್‌ನು ನಿಧಾನಕ್ಕೆ ಜಾರ್ಜ್ ಇದ್ದ ಸ್ಥಳಕ್ಕೆ ಬಂದನು. ಅವರಿಬ್ಬರೂ ಸರಸ್ವತಿಯನ್ನು ಎಳೆದುಕೊಂಡು ಆ ಕಾಡಿನ ಕತ್ತಲೆಯಲ್ಲಿ ಕಣ್ಮರೆಯಾದರು.

ಅದೃಶ್ಯ ರೂಪದಲ್ಲಿ ಕೂಡ ಸರಸ್ವತಿಯನ್ನು ಬಿಡಿಸಲು ಹೋದರೆ ಅವಳ ಪ್ರಾಣವು ಅಪಾಯದಲ್ಲಿ ಇದೆ ಎಂದು ಗಾಮಾನಿಗೆ ಗೊತ್ತಿತ್ತು.

ತನ್ನ ಆಸ್ತಿಯೆಂದು ತಿಳಿದಿದ್ದ ನಿಧಿಯ ಬಗ್ಗೆ ಎಲ್ಲರಿಗೂ ಗೊತ್ತಾಗಿದೆ ಎಂದು ಖಿನ್ನ ಮನಸ್ಕರಾಗಿ ನರಸಿಂಹಮೂರ್ತಿಗಳು ತಲೆಯ ಮೇಲೆ ಕೈ ಹೊತ್ತು ನೆಲದ ಮೇಲೆ ಕುಳಿತಿದ್ದರು.

ನಿಂಗನ ಶವವು ಅನಾಥವಾಗಿ ಪೊದೆಯಲ್ಲಿ ಬಿದ್ದಿತ್ತು.

೨೯

ಸರಸ್ವತಿಯ ನಿರ್ಗಮನದಿಂದ ಗಾಮಾನು ಬಹಳ ಹತಾಶನಾಗಿದ್ದ. ಅದೃಶ್ಯನಾಗಿ ಸರಸ್ವತಿಯನ್ನು ಬಂಧನದಿಂದ ಬಿಡಿಸಿಕೊಂಡು ಬರಬಹುದಾಗಿದ್ದರೂ ಸರಸ್ವತಿಯ ಪ್ರಾಣವು ಅಪಾಯದಲ್ಲಿದೆ ಎಂಬುದನ್ನು ಆತನು ಅರಿತಿದ್ದನು. ಗುಹೆಯನ್ನು ಪರೀಕ್ಷಿಸಲು ತೊಡಗಬೇಕೆ ಅಥವಾ ಸರಸ್ವತಿಯನ್ನು ಬಿಡಿಸಲು ಪ್ರಯತ್ನಿಸಬೇಕೆ ಎಂಬ ಪ್ರಶ್ನೆಗಳು ಆತನಿಗೆ ಎದುರಾದವು. ಮುಖ್ಯವಾಗಿ ಮನುಷ್ಯರಲ್ಲಿ ಅಗಲುವಿಕೆಯ ದುಃಖ ಯಾವ ರೂಪದಲ್ಲಿ ಇರುತ್ತದೆ ಎಂಬ ಅರಿವು ಆತನಿಗೆ ಉಂಟಾಗತೊಡತೊಡಗಿತ್ತು. ಆ ರಾತ್ರಿಯಲ್ಲಿ ಖಿನ್ನ ಮನಸ್ಕನಾಗಿ ಗಾಮಾ ಒಂದೆಡೆ ಕುಳಿತಿದ್ದರೆ ತಮ್ಮ ನಿಧಿಯನ್ನು ಕಾಯುವ ಸೋತ ಸರ್ಪದಂತೆ ಇನ್ನೊಂದೆಡೆ ನರಸಿಂಹಮೂರ್ತಿಗಳು ಕುಳಿತಿದ್ದರು. ಗುಂಡಪ್ಪ, ಪ್ರಶಾಂತ ಮತ್ತು ಚಂಡೀದಾಸರು ಒಂದು ವಿಶಾಲವಾದ ಗುಂಡಿಯನ್ನು ತೋಡಿ ನಿಂಗನ ಸಮಾಧಿಯನ್ನು ಮಾಡುವ ಪ್ರಯತ್ನದಲ್ಲಿ ತೊಡಗಿದ್ದರು. ಚಂಡೀದಾಸನು ಈಗ ಗಾಮಾನನ್ನು ಬಂಧಿಸುವುದೇ ಅಥವಾ ಸರಸ್ವತಿಯನ್ನು ಹುಡುಕಿಕೊಂಡು ಹೊರಡಬೇಕೆ ಎನ್ನುವ ತಾಕಲಾಟಕ್ಕೆ ಒಳಗಾಗಿದ್ದನು. ಕೊನೆಗೆ ನಿಧಿಯನ್ನು ಕಾಯುವ ಕೆಲಸವು ಮಹತ್ವದ್ದೆಂದು ಆತನಿಗೆ ಅನ್ನಿಸಿತು. ಏಕೆಂದರೆ ನಿಧಿ ಇದ್ದಲ್ಲಿ ಕದೀಮರು ಮತ್ತೆ ಬರುವ ಸಾಧ್ಯತೆಗಳಿವೆಯೆಂದು ಆತನು ಯೋಚಿಸಿದ.

ನಿಂಗನ ಸಮಾಧಿಯ ಕೆಲಸವನ್ನು ಮುಗಿಸಿದ ನಂತರ ಪ್ರಶಾಂತ, ರೀಟಾ ಮತ್ತು ಗುಂಡಪ್ಪ ಮಂತ್ರಾಲೋಚನೆಯಲ್ಲಿ ತೊಡಗಿದರು.

'ಸರಸ್ವತಿಯನ್ನು ನಾವು ಬಂಧಿಸಬೇಕೆಂದಿದ್ದೆವು. ಆದರೆ ಆ ಕದೀಮರೇ ಆ ಕೆಲಸವನ್ನು ಮಾಡಿಬಿಟ್ಟರು' ಎಂದ ಪ್ರಶಾಂತ.

'ಸರಸ್ವತಿಯ ಸಹಾಯಕ್ಕೆ ಧಾವಿಸಬೇಕಾದ್ದು ನಮ್ಮ ಪ್ರಥಮ ಕರ್ತವ್ಯ' ಎಂದಳು ರೀಟಾ. ಗುಂಡಪ್ಪನೂ ಅವಳ ಮಾತಿಗೆ ಸಮ್ಮತಿಸಿದ. ಪ್ರಶಾಂತನು ಸ್ವಲ್ಪ ಕಾಲದ ಮೌನದ ನಂತರ ಹೇಳಿದ 'ನಿಧಿ ಇರುವಲ್ಲಿ ನಾನು ಮತ್ತು ಗುಂಡಪ್ಪ ಇರಲೇಬೇಕು. ರೀಟಾ ಇದು ನಿಮಗೆ ಪರೀಕ್ಷೆಯ ಕಾಲ. ನೀನು ಸರಸ್ವತಿಯನ್ನು ಹೇಗಾದರೂ ಮಾಡಿ ಆ ದುಷ್ಟರಿಂದ ಬಿಡಿಸಿ ಕೊಂಡು ಬರಬೇಕು. ಕದೀಮರು ಗುಹೆಯ ಜಾಗಕ್ಕೆ ಬರುವ ಸಾಧ್ಯತೆಗಳು ಹೆಚ್ಚಿರುವುದರಿಂದ ನನ್ನ ಮತ್ತು ಗುಂಡಪ್ಪನ ಶಕ್ತಿಯ ಅವಶ್ಯಕತೆ ತುಂಬಾ ಇದೆ. ನೀನಿನ್ನು ಹೊರಡು' ಎಂದು ತನ್ನ ರಿವಾಲ್ವರನ್ನು ಆಕೆಯ ಕೈಗೆ ಕೊಟ್ಟನು. ರೀಟಾ ಸಮಸ್ಯೆಯ ಗಂಭೀರತೆಯನ್ನು ಅರಿತ ಹೆಂಗಸಾಗಿದ್ದಳು. ಆದರೆ ಈ ಮೊದಲು ಸರಸ್ವತಿಯನ್ನು ಅಪಹರಿಸಬೇಕೆಂದು ವಾದಿಸುತ್ತಿದ್ದ ಪ್ರಶಾಂತನೇ ಈಗ ಸರಸ್ವತಿಯ ರಕ್ಷಣೆಗೆ ಕಂಕಣಬದ್ಧವಾಗಿ ನಿಂತಿರುವುದನ್ನು ನೋಡಿ ಅವಳಿಗೆ ಆಶ್ಚರ್ಯವಾಯಿತು. ಪ್ರಶಾಂತನ ಬಗ್ಗೆ ಹೆಚ್ಚಿನ ಆದರ ಗೌರವಗಳು ಅವಳಲ್ಲಿ ಮೂಡಿದವು.

ಆ ಕತ್ತಲ ರಾತ್ರಿಯಲ್ಲಿ ರೀಟಾಳು ಒಂದು ಕೈಯಲ್ಲಿ ಅಪಾಯದಲ್ಲಿ ನೆರವಿಗೆ ಬರಬಹುದಾದ ಒಂದು ಬ್ಯಾಗನ್ನು ಇನ್ನೊಂದು ಕೈಯಲ್ಲಿ ರಿವಾಲ್ವರನ್ನು ಹಿಡಿದು ಆ ಕಾನನದಲ್ಲಿ ಹೊರಟು ಕಾಲುದಾರಿ ಕೂಡ ಇಲ್ಲದ ಆ ಇಳಿಜಾರು ಪ್ರದೇಶದಲ್ಲಿ ರೀಟಾ ಬಹಳ ಎಡರು ತೊಡರುಗಳನ್ನು ಎದುರಿಸಬೇಕಾಗಿತ್ತು. ಒಂದು ಮರವನ್ನು ಹತ್ತಿ ದೂರದಲ್ಲಿ ಬೆಂಕಿ ಕಾಣಿಸಿದರೆ ಅಲ್ಲಿ ಕದೀಮರು ಇದ್ದಾರೆಂದು ತಿಳಿಯಬಹುದೆಂದುಕೊಂಡು ರೀಟಾ ಒಂದು ದೊಡ್ಡ ದೇವದಾರು ವೃಕ್ಷವನ್ನು ಏರಿದಳು. ಅವಳು ಹತ್ತು ನಿಮಿಷ ವೀಕ್ಷಿಸಿದ ನಂತರ ಅನತಿ ದೂರ ದಲ್ಲಿಯೇ ಬೆಂಕಿಯು ಉರಿಯುತ್ತಿದ್ದ ಒಂದು ತಾಣವನ್ನು ಕಂಡಳು ರೀಟಾ ಸರಸರನೆ ಮರವನ್ನು ಇಳಿದು ಬೆಂಕಿಯ ತಾಣದತ್ತ ಹೆಜ್ಜೆ ಹಾಕಿದಳು. ಆ ಸ್ಥಳ ವನ್ನು ಕಂಡುಹಿಡಿದೊಡನೆ ರೀಟಾಳು ಮರವೊಂದರ ಹಿಂದೆ ಅಡಗಿಕೊಂಡಳು. ಸರಸ್ವತಿಯನ್ನು ಒಂದು ಮರಕ್ಕೆ ಕಟ್ಟಿಹಾಕಲಾಗಿತ್ತು. ಆದರೆ ಜಾರ್ಜ್ ಮತ್ತು ಕಣ್ಣನ್‌ರ ಮಾತುಗಳು ಸ್ಪಷ್ಟವಾಗಿ ರೀಟಾಳಿಗೆ ಕೇಳಿಸುತ್ತಿತ್ತು.

'ಆ ಹೊಸಬನು ಚಂಡೀದಾಸನೊಡನೆ ಇಲ್ಲದಿದ್ದರೆ ನಮ್ಮ ನಿಂಗ ಹೀಗೆ ಸಾಯುತ್ತಿರಲಿಲ್ಲ' ಎಂದ ಕಣ್ಣನ್.

'ಸತ್ತದ್ದು ಮರಳಿ ಬರುವುದಿಲ್ಲ. ಆದರೆ ಕೊಂದವರನ್ನು ಸುಮ್ಮನೆ ಬಿಟ್ಟರೆ ನಾವು ಈ ಕಸಬಿನಲ್ಲಿ ಇರಲು ಯೋಗ್ಯರಲ್ಲ' ಎಂದ ಜಾರ್ಜ್.

'ಅದು ಸರಿ ಆದರೆ ಅಷ್ಟು ಜನರೆದುರು ನಾವಿಬ್ಬರೇ ಹೋರಾಡಲು ಸಾಧ್ಯವೆ'?

'ಸಾಧ್ಯವಿಲ್ಲ ನಿಜ. ಆದರೆ ಈ ಹೆಂಗಸನ್ನು ಎಳೆದುಕೊಂಡು ಬಂದಿರುವುದರಿಂದ ಆ ಜನರೆಲ್ಲ ನಮ್ಮ ಕಾಲಿಗೆ ಸಹಜವಾಗಿ ಬೀಳುತ್ತಾರೆ. ಅವರ ಮೂಲಕವೇ ಚಂಡೀದಾಸನನ್ನು ಹೇಗೆ ಮುಗಿಸಬೇಕು ಎನ್ನುವ ಯೋಜನೆಯು ನನ್ನ ಬಳಿ ಈಗ ಸಿದ್ಧವಾಗಿದೆ'

'ಏನದು ಯೋಜನೆ'?

ರೀಟಾ ಮೈಯೆಲ್ಲ ಕಿವಿಯಾಗಿ ನಿಂತುಕೊಂಡಳು.

'ಈ ಹೆಂಗಸನ್ನು ಅವರಿಗೆ ಕಾಣುವಂತೆ ಒಂದು ದೂರದ ಮರಕ್ಕೆ ಕಟ್ಟಿ ಹಾಕೋಣ ಗುಹೆಯ ಬಾಗಿಲು ತೆರೆನೊಡನೆ ಎರಡು ಷರತ್ತುಗಳನ್ನು ಒಡ್ಡೋಣ. ನಿಧಿಯನ್ನು ನಮಗೆ ಒಪ್ಪಿಸಬೇಕು ಮತ್ತು ನಿಂಗನನ್ನು ಕೊಂದ ವ್ಯಕ್ತಿಯೇ ಚಂಡೀದಾಸನನ್ನು ಕೊಲ್ಲಬೇಕು. ಈ ಷರತ್ತುಗಳಿಗೆ ಅವರು ಒಪ್ಪದಿದ್ದರೆ ಈ ಹೆಂಗಸನ್ನು ಅವರ ಮುಂದೆಯೇ ಕೊಂದು ಹಾಕೋಣ. ಸತ್ತ ಸ್ನೇಹಿತನಿಗಾಗಿ ಇಷ್ಟಾದರೂ ನಾವು ಮಾಡಲೇಬೇಕು' ಎಂದ ಜಾರ್ಜನ ಧ್ವನಿಯು ದುಃಖಭರಿತವಾಗಿತ್ತು. ಅವರ ಮಾತನ್ನು ಕೇಳುತ್ತಿದ್ದ ರೀಟಾ ಇಡೀ ರಾತ್ರಿ ಅಲ್ಲಿಯೇ ಉಳಿದು ಅವರ ಚಲನವಲನಗಳ ಮೇಲೆ ನಿಗಾ ಇಡಬೇಕೆಂದು ನಿರ್ಧರಿಸಿದಳು.

೩೦

ಮರುದಿನ ಬೆಳಗ್ಗೆ ಸೂರ್ಯನು ಉದಯಿಸಿದ ಮೇಲೆಯೂ ಆ ಕಣಿವೆಯಲ್ಲಿ ಬೆಳಕು ಹರಿಯಲು ಸಾಕಷ್ಟು ಸಮಯವಾಯಿತು. ಕಬ್ಬಿಣದ ಗುಡ್ಡದ

ತುದಿಯಲ್ಲಿ ಸೂರ್ಯನ ಕಿರಣಗಳು ಹೊಳೆಯುವುದಕ್ಕೆ ಪ್ರಾರಂಭಿಸಿದ ಮೇಲೆ ನಿಧಾನವಾಗಿ ಬೆಳಕು ಕಣಿವೆಯಲ್ಲಿ ನುಸುಳಿ ಬರತೊಡಗಿತು. ಗಾಮಾ ಮತ್ತು ನರಸಿಂಹಮೂರ್ತಿಗಳು ಬೆಳಿಗ್ಗೆ ಎದ್ದಾಗ ಐದು ಗಂಟೆಯ ಸಮಯವಾಗಿತ್ತು. ಪ್ರಶಾಂತ, ಗುಂಡಪ್ಪ ಮತ್ತು ಚಂಡೀದಾಸನು ಇನ್ನೂ ದೀರ್ಘವಾದ ನಿದ್ರೆಯಲ್ಲಿ ಇದ್ದರು. ಆಗ ಗುಹೆಯ ಬಂಡೆಗಲ್ಲು ತನ್ನಷ್ಟಕ್ಕೆ ನಿಧಾನವಾಗಿ ತೆರೆಯಲು ಪ್ರಾರಂಭಿಸಿತು. ತೆರೆದ ಬಾಯಿಯಿಂದ ಗಾಮಾ ಮತ್ತು ನರಸಿಂಹಮೂರ್ತಿಗಳು ಈ ದೃಶ್ಯವನ್ನು ನೋಡುತ್ತಿದ್ದರು. ನಂತರ ಬಂಡೆಯು ಸರಿಯುವುದು ನಿಂತಿತು. ಸರಿದ ಭಾಗದಿಂದ ಸನ್ಯಾಸಿಯೊಬ್ಬನು ಹೆಗಲ ಮೇಲೆ ಹೆಬ್ಬಾವನ್ನು ಇಳಿಬಿಟ್ಟುಕೊಂಡು ನಿಧಾನಕ್ಕೆ ಹೊರಗೆ ಬಂದನು. ಆತನು ಹೊರಬಂದೊಡನೆ ಬಂಡೆಯು ಮತ್ತೆ ಮೊದಲಿನಂತೆ ಮುಚ್ಚಿಕೊಂಡಿತು. ಈಗ ಆ ಸನ್ಯಾಸಿಯು ಇವರ ಪಕ್ಕದಲ್ಲಿಯೇ ಬಂದು ಗಾಮಾನನ್ನು ನೋಡಿ ಒಂದು ಸಲ ಮುಗುಳ್ನಗೆ ನಕ್ಕು ಮುಂದೆ ಹೊರಟುಹೋದನು. ನರಸಿಂಹ ಮೂರ್ತಿಗಳು ಆತನನ್ನು ಹಿಂಬಾಲಿಸಲು ಎದ್ದರು. ಆದರೆ ಗಾಮಾನು ಅವರ ಕೈಹಿಡಿದು ಕೂಡಿಸುತ್ತಾ ಹೇಳಿದ. 'ಮೂರ್ತಿಗಳೇ ಮುಗುಳ್ನಗೆಯ ಮೂಲಕ ಆತನು ನಮ್ಮನ್ನು ಸ್ವಾಗತಿಸಿದ್ದಾನೆ. ನಮ್ಮ ಲೋಕದ ಸಿಷ್ಟಾಚಾರದ ಪ್ರಕಾರ ಮುಗುಳ್ನಗೆಯು ಅನುಮತಿಯ ಸಂಜ್ಞೆ. ಆತನು ಬಂಡೆಯನ್ನ ಸರಿಸಲು ಸಂಜ್ಞೆಯ ಮೂಲಕ ಅನುಮತಿ ನೀಡಿದ್ದಾನೆ. ಬನ್ನಿ' ಎಂದು ಬಂಡೆಯತ್ತ ಅವರು ನಡೆದರು. ಇಷ್ಟು ಹೊತ್ತಿಗೆ ಪ್ರಶಾಂತನು ಕಣ್ಣುಬಿಟ್ಟು ನೋಡತೊಡಗಿದ್ದ. ಕೂಡಲೇ ಗಾಮಾ ಅದೃಶ್ಯನಾದುದನ್ನು ಕಂಡ. ಆಗ ಆತನು ತನ್ನ ಉಳಿದ ಸಂಗಡಿಗರನ್ನು ಎಬ್ಬಿಸಿ ಬಂಡೆಯತ್ತ ನಡೆದ. ಅದೃಶ್ಯನಾದ ಗಾಮಾನು ತನ್ನೆಲ್ಲಾ ಶಕ್ತಿಯನ್ನು ಉಪಯೋಗಿಸಿ ಬಂಡೆಯುನ್ನು ನಿಧಾನಕ್ಕೆ ಸರಿಸಿದ. ಜನರು ಒಳಹೋಗುವಷ್ಟು ಸ್ಥಳವು ಸಿಕ್ಕೊಡನೆ ಮನುಷ್ಯ ರೂಪವನ್ನು ಧರಿಸಿ ಇತರರೊಡನೆ ಗಾಮಾನು ಗುಹೆಯನ್ನು ಪ್ರವೇಶಿಸಿದ. ಗುಹೆಯ ಬಂಡೆಯು ಎಲ್ಲರೂ ಪ್ರವೇಶಿಸಿದೊಡನೆ ತಾನೇ ತಾನಾಗಿ ಮತ್ತೆ ಮುಚ್ಚಿಕೊಂಡಿತು. ಬಂಡೆಯು ಮುಚ್ಚಿದೊಡನೆ ಗುಹೆಯಲ್ಲಿ ಕತ್ತಲು ಆವರಿಸಬಹುದೆಂದು ಅವರೆಲ್ಲಾ ಬಗೆದಿದ್ದರು. ಆದರೆ ವಿಲಕ್ಷಣವಾದ ಬೆಳಕೊಂದು ಗುಹೆಯ ಒಳಭಾಗವನ್ನು ಆವರಿಸಿಕೊಂಡಿತ್ತು.

ಕೆಲ ಹೆಜ್ಜೆ ಇವರು ಮುಂದೆ ಹೋದೊಡನೆ ನಾಲ್ವರು ಜಟಾ ಜೂಟಾಧಾರಿಗಳು ತಪಸ್ಸಿಗೆ ಕೂತಿರುವ ದೃಶ್ಯವು ಇವರ ಕಣ್ಣಿಗೆ ಬಿದ್ದಿತು. ನಂತರ ಗುಹೆಯ ಮೂಲೆಯೊಂದರಿಂದ 'ಬಾ ಗಾಮಾ ಇತ್ತ ಬಾ' ಎಂದು ಧ್ವನಿಯೊಂದು ಕೇಳಿ ಬಂದಿತು. ತನ್ನ ಹೆಸರು ಗುಹೆಯಲ್ಲಿರುವ ಒಂದು ವ್ಯಕ್ತಿಗೆ ಗೊತ್ತಿದೆ ಎಂಬುದು ತಿಳಿದೊಡನೆ ಗಾಮಾನಿಗೆ ಆಶ್ಚರ್ಯವಾಯಿತು. ಧ್ವನಿಯು ಬಂದತ್ತ ಗಾಮಾನು ನಡೆದ. ಉಳಿದವರೂ ಆತನನ್ನು ಹಿಂಬಾಲಿಸಿದರು. ಆ ಭಾಗದಲ್ಲಿ ಗುಹೆಯು ಕಿರುದಾಗುತ್ತಾ ಹೋಗುವುದರಿಂದ ಎಲ್ಲರೂ ಬಗ್ಗಿ ಆ ಕಡೆ ನಡೆಯ ತೊಡಗಿದರು. ಕೆಲವು ಹೆಜ್ಜೆ ಕ್ರಮಿಸುವಷ್ಟರಲ್ಲಿ ಪೀಠದ ಮೇಲೆ ವ್ಯಕ್ತಿಯೊಂದು ಕುಳಿತಿರುವುದು ಕಂಡುಬಂದಿತು. ಆ ವ್ಯಕ್ತಿಯ ಹಿಂಭಾಗದಿಂದಲೇ ವಿಲಕ್ಷಣವಾದ ಬೆಳಕು ಬಂದು ಗುಹೆಯನ್ನೆಲ್ಲಾ ಆವರಿಸಿತ್ತು. ಅದೇ ವ್ಯಕ್ತಿ ಈಗ ಕಣ್ಣು ತೆರೆಯಿತು. ಕಣ್ಣುಗಳು ತೇಜಸ್ಸಿನ ಪುಂಜಗಳಂತಿದ್ದು ನೇರವಾಗಿ ಅವುಗಳನ್ನು ನೋಡಲು ಸಾಧ್ಯವಾಗುತ್ತಿರಲಿಲ್ಲ. ಎಲ್ಲರೂ ನೇರವಾಗಿ ಆ ವ್ಯಕ್ತಿಯ ಎದುರು-ಸ್ಥಳದಲ್ಲಿ ಕುಳಿತುಕೊಂಡರು. ಬೆಳಕಿನ ದಿವ್ಯ ವ್ಯಕ್ತಿಯು ಮತ್ತೆ, 'ಗಾಮಾ ನಿನಗೆ ಸುಸ್ವಾಗತ' ಎಂದಿತು

'ನನ್ನ ಹೆಸರು ನಿಮಗೆ.......'

'ಗೊತ್ತಿದೆ. ನಾನು ಹಲವಾರು ನೂರು ವರ್ಷಗಳ ಹಿಂದೆ ನಿಮ್ಮ ಲೋಕದಿಂದಲೇ ಬಂದೆ. ನೀನು ಪಟ್ಟ ಪಾಡನ್ನೇ ಪಟ್ಟೆ. ಕೊನೆಗೆ ಇಲ್ಲಿಯೇ ಉಳಿದೆ. ಅದೋ ಚಂದರಸನ ಸಮಾಧಿ ಅಲ್ಲಿದೆ', ಎಂದು ಹಲವಾರು ಸಮಾಧಿಗಳಿದ್ದ ಒಂದು ಭಾಗದತ್ತ ಆ ವ್ಯಕ್ತಿಯು ಕೈ ಮಾಡಿತು. ಎಲ್ಲರೂ ಅತ್ತ ತಿರುಗಿ ನೋಡಿದರು. ಅಲ್ಲಿ ಹಲವಾರು ಚಿಕ್ಕ ದೊಡ್ಡ ಸಮಾಧಿಗಳು ಇದ್ದವು. ವ್ಯಕ್ತಿಯು ತನ್ನ ಮಾತನ್ನು ಮುಂದುವರಿಸಿ ಹೇಳಿತು, 'ನಿನಗಾಗಿರುವಂತೆಯೇ ನನಗೂ ಆಗ ನಮ್ಮ ಲೋಕದಿಂದ ಬಿಡುಗಡೆ ಪಡೆದು, ದೇವರನ್ನು ಹುಡುಕಬೇಕೆಂಬ ಆಸೆ ಹುಟ್ಟಿತು. ನಮ್ಮವರಿಂದ ತಪ್ಪಿಸಿಕೊಂಡು ಈ ಗಿರಿಯ ಕಾಡಿನಲ್ಲಿ ಅಲೆಯುತ್ತಿದ್ದೆ. ಹೆಬ್ಬಾವು ಹಿಡಿದಿಟ್ಟುಕೊಂಡು ಹೊರಟ ಸನ್ಯಾಸಿಯನ್ನು ಈಗಾಗಲೇ ನೀನು ನೋಡಿರುವಿ. ಒಂದು ಅರ್ಥದಲ್ಲಿ ಆತನು ದೇವದೂತ. ಧ್ಯಾನದ ಹಸಿವು ಹೆಚ್ಚಾದವರನ್ನು ಇಲ್ಲಿಗೆ ಕರೆದುತರುತ್ತಾನೆ. ಹಾಗೆಯೇ ನನ್ನನ್ನೂ ಇಲ್ಲಿಗೆ ಕರೆದು ತಂದ. ಆಗ ಚಂದರಸನು ಸಾಕ್ಷಾತ್ಕಾರದ

ಕೊನೆಯ ಹಂತವನ್ನು ಮುಟ್ಟಿದ್ದ. ನಮ್ಮವರು ನನ್ನನ್ನು ಬೆನ್ನಟ್ಟಿಕೊಂಡು ಇಲ್ಲಿಯವರೆಗೆ ಬಂದರು. ಆದರೆ ಚಂದರಸನ ದಿವ್ಯಶಕ್ತಿಯು ಅವರನ್ನು ಗುಹೆಯ ಒಳಗೆ ಬರದಂತೆ ತಡೆಹಿಡಿಯಿತು. ಕೊನೆಗೆ ಚಂದರಸನ ಮಾರ್ಗ ದರ್ಶನದಲ್ಲಿ ನಾನು ಸಾಕ್ಷಾತ್ಕಾರದ ಹಾದಿಯಲ್ಲಿ ನಡೆದೆ. ನಿಧಿಯೊಂದಿಗೆ ಬಂದ ಚಂದರಸನು ಅಪೂರ್ವವಾದ ಜ್ಞಾನದ ನಿಧಿಯನ್ನು ಪಡೆದ. ಆತನ ನಿಧಿಯು ಅವನ ಸಮಾಧಿಯಲ್ಲಿಯೇ ಇದೆ' ಎಂದು ವ್ಯಕ್ತಿಯು ತನ್ನ ಮಾತನ್ನು ಮುಗಿಸಿತು.

ಅಲ್ಲಿ ಹಲವಾರು ಸಮಾಧಿಗಳಿದ್ದವು. ಅದರಲ್ಲಿ ಚಂದರಸನ ಸಮಾಧಿ ಯಾವುದು ಎಂದು ನರಸಿಂಹಮೂರ್ತಿಗಳು ಕುತೂಹಲ ತಾಳಿದರು. ಕೊನೆಗೆ ಕುತೂಹಲವನ್ನು ತಾಳಲಾರದೇ, 'ಚಂದರಸನ ಸಮಾಧಿ ಯಾವುದು' ಎಂದು ಆ ದಿವ್ಯ ಜ್ಞಾನಿಯನ್ನು ಕೇಳಿಬಿಟ್ಟರು.

'ಬಲದಿಂದ ಮೂರನೆಯದು. ಸಮಾಧಿಯನ್ನು ಪಡೆಯುವುದೆಂದರೆ ಸಾಯುವುದೆಂದು ಅರ್ಥವಲ್ಲ. ಜ್ಞಾನಿಗೆ ಸಾವು ಎಲ್ಲಿ? ಸಮಾಧಿಯು ಧ್ಯಾನದ ಮುಂದಿನ ಅವಸ್ಥೆ ಅಷ್ಟೇ. ಗುಹೆಯಲ್ಲಿ ಪ್ರವೇಶಿಸಲಾಗದ ನನ್ನವರು ಹತಾಶರಾಗಿ ಗುಹೆಗೆ ಬಂಡೆಯನ್ನಿಕ್ಕಿ ಹೋದರು. ಆದರೆ ತಪಸ್ಸಿನ ಶಕ್ತಿ ಯಿಂದ ಬಂಡೆಯು ತಾನೇ ತೆರೆಯುತ್ತದೆ ಮತ್ತು ಮುಚ್ಚಿಕೊಳ್ಳುತ್ತದೆ.' ವ್ಯಕ್ತಿಯು ತನ್ನ ಮಾತನ್ನು ಮುಗಿಸುತ್ತಿದ್ದಂತೆಯೇ 'ಢಂ' ಎಂಬ ಘೋರ ಶಬ್ದವು ಉಂಟಾಯಿತು. ಕ್ಷಣಾರ್ಧದಲ್ಲಿ ಗುಹೆಯ ಬಾಗಿಲಿಗಿದ್ದ ಬಂಡೆಯು ಚೂರುಚೂರಾಗಿ ಒಡೆದು ಬಿದ್ದಿತು. ಜಾರ್ಜ್ ಮತ್ತು ಕಣ್ಣನ್ ಡೈನಮೈಟ್ ಮೂಲಕ ಬಂಡೆಯನ್ನು ಹೊಡೆದು ಹಾಕಿದ್ದರು. ಈಗ ಗುಹೆಯು ಪೂರ್ತಿಯಾಗಿ ಹೊಗೆಯಿಂದ ತುಂಬಿಹೋಗಿತ್ತು. ಕಲ್ಲಿನ ಚೂರುಗಳು ಗುಹೆಯ ತುಂಬ ಪಸರಿಸಿಕೊಂಡಿದ್ದವು. ಇಷ್ಟು ಘೋರ ಶಬ್ದವಾದರೂ ನಾಲ್ವರು ತಪಸ್ವಿಗಳು ಸ್ವಲ್ಪವೂ ವಿಚಲಿತರಾಗದೆ ಕಣ್ಣು ಕೂಡ ತೆರೆಯದೇ ಧ್ಯಾನದಲ್ಲಿ ಮುಳುಗಿದ್ದರು. ಬರುಬರುತ್ತಾ ಗುಹೆಯಲ್ಲಿಯ ಹೊಗೆಯು ಕಡಿಮೆಯಾಗುತ್ತಾ ಬಂದು ಒಬ್ಬರ ಮುಖ ಒಬ್ಬರಿಗೆ ಕಾಣುವಂತಾಯಿತು. ದಿವ್ಯ ಬೆಳಕನ್ನು ಹೊಂದಿದ್ದ ಜ್ಞಾನಿ ಮಾತ್ರ ಕಣ್ಣು ತೆರೆದು ಮುಗುಳ್ನಗೆ ಯನ್ನು ಸೂಸುತ್ತ ಕುಳಿತಿದ್ದ. ಈಗ ನರಸಿಂಹಮೂರ್ತಿಗಳು ಚಂದರಸನ

ಸಮಾಧಿಯ ಪಕ್ಕದಲ್ಲಿ ನಿಂತಿದ್ದರು. ಜಾರ್ಜ್ ಗುಹೆಯ ಬಾಗಿಲಿನಲ್ಲಿ ಪ್ರತ್ಯಕ್ಷನಾದನು. ಆತನ ಕೈಯಲ್ಲಿ ರಿವಾಲ್ವರ್ ಇತ್ತು. 'ಯಾರಾದರೂ ತಮ್ಮ ಸ್ಥಳವನ್ನ ಬಿಟ್ಟು ಅಲುಗಾಡಿದರೆ ಅವರನ್ನು ಸುಟ್ಟು ಹಾಕುತ್ತೇನೆ. ಅಲ್ಲಿ ನೋಡಿ' ಎಂದು ಹೊರಗಡೆ ಕೈ ಮಾಡಿ ಒಂದು ಮರವನ್ನು ತೋರಿಸಿದ. ಆ ಮರಕ್ಕೆ ಸರಸ್ವತಿಯನ್ನು ಕಟ್ಟಲಾಗಿತ್ತು. ಅವಳ ತಲೆಗೆ ಕಣ್ಣನ್ ರಿವಾಲ್ವರನ್ನು ಗುರಿಯಿಟ್ಟು ನಿಂತುಕೊಂಡಿದ್ದ. ಗಾಮಾ ಅಸಹಾಯಕನಾಗಿ ಜ್ಞಾನಿಗಳತ್ತ ನೋಡಿದ. ಅವರು ಕಣ್ಣಿನ ಮೂಲಕವೇ ಸಮಾಧಾನವಾಗಿರು ವಂತೆ ಸೂಚಿಸಿದರು. ಜಾರ್ಜನು ಒಳಗೆ ಪ್ರವೇಶಿಸುತ್ತಾ ನರಸಿಂಹಮೂರ್ತಿ ಗಳಿಗೆ ರಿವಾಲ್ವರನ್ನು ನೇರವಾಗಿ ಗುರಿ ಹಿಡಿದು 'ಎಲ್ಲಿ ಚಂದರಸನ ನಿಧಿ' ಎಂದು ಅಬ್ಬರಿಸಿದ. ಹೆದರಿದ ನರಸಿಂಹಮೂರ್ತಿಗಳು 'ಇದೇ ಆತನ ಸಮಾಧಿ, ಇಲ್ಲಿಯೇ ಆತನ ನಿಧಿ ಇದೆಯಂತೆ' ಎಂದು ನಡುಗುತ್ತಾ ಹೇಳಿದರು. ಕೂಡಲೇ ಜಾರ್ಜನು ಆ ಕಡೆಗೆ ಧಾವಿಸಿದನು. 'ನನಗೇನಾದರೂ ಅಪಾಯ ವನ್ನು ತಂದೊಡ್ಡಿದರೆ ಸರಸ್ವತಿಯ ಪ್ರಾಣವು ಹೋಗುತ್ತದೆ ಜೋಪಾನ' ಎಂದು ರಿವಾಲ್ವರನ್ನು ತನ್ನ ಜೇಬಿನಲ್ಲಿ ಸೇರಿಸಿ ತಾನು ತಂದ ಬ್ಯಾಗಿನಲ್ಲಿದ್ದ ಚಿಕ್ಕ ಪಿಕಾಸಿಯೊಂದನ್ನು ಹೊರತೆಗೆದನು. ಎಲ್ಲರೂ ಭಯದಿಂದ ಜ್ಞಾನಿ ಗಳತ್ತ ನೋಡತೊಡಗಿದರು. ಏಕೆಂದರೆ ಜಾರ್ಜನು ಮಹಾ ತಪಸ್ವಿಯೊಬ್ಬನ ಸಮಾಧಿಯನ್ನು ಅಗೆದು ತೆಗೆಯಲು ಹೊರಟಿರುವುದು ಅವರೆಲ್ಲರಲ್ಲಿಯೂ ಭಯ ವನ್ನು ಹುಟ್ಟಿಸಿತ್ತು. ಜ್ಞಾನಿಗಳು ವಿಚಲಿತರಾಗದೆ, 'ಎಲ್ಲರೂ ಸಮಾಧಾನ ದಿಂದ ಕುಳಿತುಕೊಳ್ಳಿ' ಎಂದು ಆಜ್ಞೆ ಇತ್ತರು. ಇಷ್ಟರಲ್ಲಿ ಹೆಬ್ಬಾವನ್ನು ಹೊತ್ತ ಸನ್ಯಾಸಿಯು ನಿಧಾನವಾಗಿ ಗುಹೆಯನ್ನು ಪ್ರವೇಶಿಸಿದನು. ಜಾರ್ಜನ ಇರುವನ್ನು ನಿರ್ಲಕ್ಷಿಸಿ ಆತನು ತಾನು ತಂದ ಹಣ್ಣು ಹಂಪಲುಗಳನ್ನು ಬಂದ ಅತಿಥಿಗಳಿಗೆ ನೀಡಿದರು. ನಂತರ ಭಯಭೀತನಾಗಿ ನಿಂತಿದ್ದ ಜಾರ್ಜನು ಸನ್ಯಾಸಿಯತ್ತ ತಿರುಗಿ, 'ನಾವಿನ್ನೂ ಬೆಂಕಿಯಲ್ಲಿ ಸತ್ತಿಲ್ಲ ಚಂದರಸನ ನಿಧಿ ಯನ್ನು ಪಡೆದೇ ಹೋಗುವುದು' ಎಂದ. ಸನ್ಯಾಸಿಯು ಪ್ರಥಮ ಬಾರಿಗೆ ಬಾಯಿ ತೆರದು, 'ಪ್ರಯತ್ನಿಸು' ಎಂದ. ಆತನ ಧ್ವನಿಯು ಬಹಳ ಸಿಹಿಯಾಗಿ ಕೊಳಲಿನ ನುಡಿಯಂತೆ ಇತ್ತು. ಹೀಗಾಗಿ ಕೆಲಹೊತ್ತು ಜಾರ್ಜನು ಕೈಯಲ್ಲಿ ಪಿಕಾಸಿಯನ್ನು ಹಿಡಿದು ಕೆಲಹೊತ್ತು ಯೋಚಿಸುತ್ತಾ ನಿಂತನು. ನಂತರ

ಧೈರ್ಯವನ್ನು ತಂದುಕೊಂಡು ಚಂದರಸನ ಸಮಾಧಿಯನ್ನು ಅಗೆಯಲು ಪ್ರಾರಂಭಿಸಿದನು. ಕೇವಲ ಮಣ್ಣಿನಿಂದ ಮಾಡಿದ್ದ ಆ ಸಮಾಧಿಯು ಒಂದೆರಡು ಅಗೆತಗಳಲ್ಲಿಯೇ ಬಾಯಿ ಬಿಟ್ಟಿತು. ನಂತರ ಜಾರ್ಜನು ಮುಖದ ಮೇಲಿನ ಬೆವರನ್ನು ಒರೆಸಿಕೊಳ್ಳಲು ತೊಡಗಿದನು. ಆಗ ಬಾಯಿ ಬಿಟ್ಟ ಸಮಾಧಿಯ ಸ್ಥಳದಿಂದ ನಾಗರ ಹಾವೊಂದು ಹೆಡೆ ಎತ್ತಿ ನಿಂತುಕೊಂಡಿತು. ಅದನ್ನು ಕಂಡೊಡನೆ ಹೆದರಿ ಜಾರ್ಜನು ಹಿಂದೆ ಸರಿದು ಹತಾಶ ಸ್ಥಿತಿಯಲ್ಲಿ ತನ್ನ ಬ್ಯಾಗಿನಲ್ಲಿ ಕೈಹಾಕಿ ಚಿಕ್ಕ ಡೈನಮೈಟನ್ನು ಹೊರತೆಗೆದು ಹಾವಿನತ್ತ ಎಸೆದುಬಿಟ್ಟನು. ಮತ್ತೆ ಢಂ ಎಂಬ ಘೋರ ಶಬ್ದವಾಯಿತು. ಚಂಡೀದಾಸನು ಸಮಯ ಪ್ರಜ್ಞೆಯಿಂದ ಅಲ್ಲಿದ್ದವರನ್ನೆಲ್ಲಾ ಎರಡು ಕೈಯಿಂದ ಬಾಚಿ ನೆಲದ ಮೇಲೆ ಮಲಗುವಂತೆ ಮಾಡಿದನು. ಹಿಂಗಾಗಿ ಆತನ ಸಂಗಡಿಗರಿಗೆ ಪ್ರಾಣಪಾಯ ಒದಗಲಿಲ್ಲ. ಆದರೆ ಮದ್ದು ಸಿಡಿದೊಡನೆ ಆತನು ಅದರ ಹೊಗೆಯಲ್ಲಿ ನುಸುಳಿಕೊಂಡು ಹೊರಗೆ ಓಡಿಬಿಟ್ಟನು. ಇದನ್ನು ಜಾರ್ಜನು ಗಮನಿಸಲೇ ಇಲ್ಲ. ನಂತರ ಹೊಗೆಯು ನಿಧಾನಕ್ಕೆ ಕಡಿಮೆಯಾದೊಡನೆ ಜಾರ್ಜನು ಚಂದರಸನ ಸಮಾಧಿಯತ್ತ ನುಗ್ಗಿ ನೋಡಿದರು. ಸಮಾಧಿ ಇದ್ದ ಸ್ಥಳದಲ್ಲಿ ಒಂದು ದೊಡ್ಡ ಗುಂಡಿಯು ನಿರ್ಮಾಣವಾಗಿತ್ತು. ಹಾವು ಅಲ್ಲಿ ಇರಲಿಲ್ಲ. ಗುಂಡಿಯು ತುಂಬಾ ಬರೀ ಇದ್ದಲಿನ ಚೂರುಗಳು ಇದ್ದವು. ಸನ್ಯಾಸಿಯು ಎರಡನೆಯ ಸಲ ಬಾಯಿ ತೆರೆದು, ‘ ಪಾಪ ! ನಿಧಿಯು ಇಲ್ಲದಾಯಿತು ’ ಎಂದ.

೩೧

ಆ ಇಡೀ ದಿನ ಸರಸ್ವತಿಯ ಸ್ಥಿತಿಯು ಚಿಂತಾಜನಕವಾಗಿತ್ತು. ಮರವೊಂದಕ್ಕೆ ಅವಳನ್ನು ಕಟ್ಟಿ ನಿಲ್ಲಿಸಿದ್ದರಿಂದ ಅವಳ ಕೈಕಾಲುಗಳು ಮರಗಟ್ಟಿದಂತಾಗಿದ್ದವು. ಚಂದರಸನ ಸಮಾಧಿಯಲ್ಲಿ ಕೇವಲ ಇದ್ದಿಲನ್ನು ಕಂಡ ಜಾರ್ಜನು ಇಡೀ ಗುಹೆಯಲ್ಲಿ ಮನಬಂದತ್ತ ಅಗೆಯಲು ಪ್ರಾರಂಭಿಸಿದ್ದನು. ತನಗೆ ಮೋಸ ಮಾಡಲಾಗಿದೆಯೆಂದು ಆತನು ಭಾವಿಸಿದ್ದನು. ಆದರೆ ಆತನ

ಪಿಕಾಸಿಯು ಗೋಡೆಯನ್ನು ಮುಟ್ಟದೊಡನೆ ಇದ್ದಿಲುಗಳು ತಾವೇ ತಾವಾಗಿ ಉದುರುತ್ತಿದ್ದವು. ಇದನ್ನೆಲ್ಲಾ ದೂರದಿಂದ ನೋಡುತ್ತಿದ್ದ ಕಣ್ಣನ್ ತನ್ನ ಸ್ನೇಹಿತನಾದ ಜಾರ್ಜನು ನಿಧಿಯನ್ನು ಅಗೆದು ತೆಗೆಯುತ್ತಿದ್ದಾನೆಂದು ಭಾವಿಸಿದ್ದನು. ಗುಹೆಯಲ್ಲಿ ಜಾರ್ಜನ ಇರುವನ್ನು ಮರೆತು ಉಳಿದವರು ಜ್ಞಾನಿಯೊಂದಿಗೆ ಶಾಂತ ಚಿತ್ತದಲ್ಲಿ ಕುಳಿತುಬಿಟ್ಟಿದ್ದರು. ಆ ಜ್ಞಾನಿಯ ಸಂಗವೇ ಅವರಿಗೆ ಅಂಥ ಒಂದು ಸಮಸ್ಥಿತಿಯನ್ನು ಒದಗಿಸಿತ್ತು. ಮಧ್ಯಾಹ್ನ, ಸಂಜೆಯಾಯಿತು, ಸಂಜೆಯು ಮುಸ್ಸಂಜೆಯಾಯಿತು,ಮುಂದೆ ಕತ್ತಲಾಯಿತು. ಆದರೆ ಜಾರ್ಜನ ಅಗೆತ ಮಾತ್ರ ನಿಂತಿರಲಿಲ್ಲ. ಬರುಬರುತ್ತಾ ಕಾನನದ ಆ ನಿಶ್ಶಬ್ದದಲ್ಲಿ ಜಾರ್ಜನ ಅಗೆತದ ಏಕನಾದ ಸಪ್ಪಳವೊಂದು ಮಾತ್ರ ಕೇಳುತ್ತಿತ್ತು. ಇದಾದ ಕೆಲ ಸಮಯದ ನಂತರ ಆಕಾಶದಲ್ಲಿ ಏಕಕಾಲಕ್ಕೆ ನಾಲ್ಕು ವಿಮಾನಗಳು ಹಾರಿದರೆ ಬರಬಹುದಾದ ಶಬ್ದದಂತೆ ಸಪ್ಪಳವೂ ಕೇಳಿ ಬರತೊಡಗಿತು ಮೊದಮೊದಲು ಬಹು ದೂರದಲ್ಲಿ ಕೇಳಿ ಬರುತ್ತಿದ್ದ ಆ ಸಪ್ಪಳವು ಇವರನ್ನು ಸಮೀಪಿಸುತ್ತಿರುವಂತೆ ಭಾಸವಾಗತೊಡಗಿತು. ಜ್ಞಾನಿ, ಗಾಮಾ, ಮತ್ತು ತಪಸ್ಸಿಗೆ ಕುಳಿತ ನಾಲ್ವರನ್ನು ಬಿಟ್ಟು ಉಳಿದವರು ಹೊರಗೆ ಓಡಿ ಆಕಾಶವನ್ನು ನೋಡಲು ಪ್ರಾರಂಭಿಸಿದರು. ಅಲ್ಲಿ ಅವರಿಗೆ ತಮ್ಮ ಜೀವನದ ಮಹದಾಶ್ಚರ್ಯವೇ ಕಾದಿತ್ತು. ಕಬ್ಬಿಣದ ಬೆಟ್ಟದ ತುದಿಯಲ್ಲಿ ಎರಡು ಹಾರುವ ತಟ್ಟೆಗಳು ಅವರಿಗೆ ಕಾಣಿಸುತ್ತಿದ್ದವು ಆ ತಟ್ಟೆಗಳ ಅವರ್ಣನೀಯ ನೀಲಿಯ ಬಣ್ಣದಿಂದಾಗಿ ಅವು ಅನ್ಯಲೋಕಕ್ಕೆ ಸೇರಿದವೆಂದು ಯಾರಾದರೂ ಗುರುತಿಸಬಹುದಾಗಿತ್ತು. ಬರುಬರುತ್ತಾ ಆ ತಟ್ಟೆಗಳು ಕಬ್ಬಿಣದ ಬೆಟ್ಟದ ತುದಿಯಿಂದ ಇಳಿಯತೊಡಗಿದವು. ಅವುಗಳು ನಮ್ಮ ವಿಮಾನಗಳಂತೆ ಇರದೆ ದುಂಡಗಿನ ಆಕಾರದಲ್ಲಿ ಹಲವಾರು ಎಲೆಕ್ಟ್ರಾನಿಕ್ ಉಪಕರಣಗಳನ್ನು ಹೊಂದಿ ಚಕಚಕನೇ ಹೊಳೆಯುತ್ತಿದ್ದವು. ಅವು ಬೆಟ್ಟದ ತುದಿಯಲ್ಲಿ ಇಳಿದಾಗ ಇಡೀ ಬೆಟ್ಟವೇ ನೀಲಿಯ ಬೆಳಕಿನಿಂದ ಆವೃತವಾಗಿ ಕೊಳ್ಳವೆಲ್ಲ ಸಂಜೆಯ ಸೂರ್ಯನ ಪ್ರಕಾಶದಿಂದ ತುಂಬಿದಂತೆ ತುಂಬಿ ಹೋಯಿತು. ಪ್ರತಿಯೊಂದು ವಸ್ತುವೂ ಆ ಕತ್ತಲಲ್ಲಿ ಕಾಣುತ್ತಿತ್ತು.

'ಗಾಮಾನನ್ನು ಹುಡುಕಿಕೊಂಡು ಬಂದಿರುವವರು ಸಂಕೇತ ಕಳುಹಿಸಿದರಲ್ಲವೇ ? ಅದಕ್ಕೆ ಆ ಲೋಕದ ಜೀವಿಗಳು ಬಂದಿದ್ದಾರೆ' ಎಂದ

ಪ್ರಶಾಂತ. ಜಾರ್ಜನು ಚಂಡೀದಾಸನ ಸಹಾಯಕ್ಕೆ ಮಿಲಿಟರಿಯವರು ಬಂದಿದ್ದಾರೆಂದು ತಿಳಿದ. ಚಂಡೀದಾಸನಿಗಾಗಿ ಸುತ್ತಲೂ ನೋಡಿದ. ಆದರೆ ಅಲ್ಲಿ ಯಾರೂ ಕಂಡುಬರಲಿಲ್ಲ. ಕೆಲ ಸಮಯದ ನಂತರ ಬೆಟ್ಟದ ತುದಿಯಿಂದ ಬೆಳಕಿನ ರೂಪದಲ್ಲಿ ಸುಮಾರು ನೂರು ಆಕೃತಿಗಳು ಇಳಿಯಲು ಪ್ರಾರಂಭಿಸಿದವು. ಗಾಮಾ ಈಗ ಗುಹೆಯ ಹೊರಗೆ ಬಂದು ಆ ದೃಶ್ಯವನ್ನು ನೋಡಿದ. ಯಾರಿಗೇ ಆದರೂ ಹೆದರಿಕೆ ಹುಟ್ಟುವಂತಹ ದೃಶ್ಯವು ಅಲ್ಲಿ ಇತ್ತು. ಗಾಮಾನಿಗೆ ಕೂಡಲೇ, 'ಲೋಕಕರ್ತೃ'ನ ವೈಯಕ್ತಿಕ ನಿಷ್ಣಾತ ಪಡೆಯು ಬಂದಿದೆ ಎಂದು ಗೊತ್ತಾಯಿತು. ಜ್ಞಾನಿಗಳು ಮಾತ್ರ ಮುಗುಳ್ನಗೆಯನ್ನು ಸೂಸುತ್ತಾ ಕುಳಿತಿದ್ದರು. ಗಾಮಾ ಅದೃಶ್ಯನಾಗಲು ಪ್ರಯತ್ನಿಸಿದ. ಆದರೆ ಅದು ಆತನಿಂದ ಸಾಧ್ಯವಾಗಲಿಲ್ಲ. ತನ್ನ ವಿಶಿಷ್ಟ ಶಕ್ತಿಗಳನ್ನು ಕಿತ್ತುಕೊಳ್ಳುವಷ್ಟು ಸಮೀಪದಲ್ಲಿಯೇ 'ಲೋಕಕರ್ತೃ' ಬಂದಿದ್ದಾನೆಂದು ಗಾಮಾನಿಗೆ ಗೊತ್ತಾಯಿತು. ಆದರೆ ಉಳಿದವರಿಗೆ ಗಾಮಾನ ಈ ಸಂಕಟ ಗೊತ್ತಾಗುತ್ತಿರಲಿಲ್ಲ. ಅವರೆಲ್ಲ ಪ್ರಾಣಭಯದಿಂದ ತತ್ತರಿಸಿ ಹೋಗಿದ್ದರು. ಸರಸ್ವತಿಯು ಹಿಂಭಾಗದಲ್ಲಿ ಬೇರೆ ಬೇರೆ ಮರಗಳ ಹಿಂದೆ ಅಡಗಿ ನಿಂತಿದ್ದ ರೀಟಾ ಮತ್ತು ಚಂಡೀದಾಸರೂ ಕೂಡ ಈ ದೃಶ್ಯವನ್ನು ನೋಡಿ ಆಶ್ಚರ್ಯದಿಂದ ಭಯಭೀತರಾಗಿದ್ದರು. ನೂರು ಬೆಳಕಿನ ರೂಪಗಳು ಏಕಕಾಲದಲ್ಲಿ ಆ ಕಣಿವೆಯಲ್ಲಿ ಪಾದಗಳನ್ನು ನೆಲಕ್ಕೆ ಮುಟ್ಟಿಸದೇ ಗಾಳಿಯಲ್ಲಿ ತೇಲುತ್ತಿರುವಂತೆ ಕಾಣುತ್ತಿದ್ದವು. ಆದರೆ ಗಾಮಾ ಮಾತ್ರ ಪ್ರಥಮ ಬಾರಿಗೆ ನಿರುಪಾಯನಾಗಿ ನಿಂತಿದ್ದ. ಜ್ಞಾನಿಗಳು ಆತನನ್ನು ಕರೆದು, 'ಅವರು ನಿನಗಾಗಿಯೇ ಬಂದಿದ್ದಾರೆ. ನೀನು ಆ ಮಹಾಮಹಿಯನಾದ ದೇವರನ್ನು ಹುಡುಕಿಕೊಂಡು ಬಂದಿರುವೆ. ಆತನನ್ನೇ ಧ್ಯಾನಿಸುತ್ತಾ ಉಳಿದ ಭಾರವನ್ನು ನನ್ನ ಮೇಲೆ ಹಾಕಿ ಕುಳಿತುಬಿಡು. ನಿನ್ನ ಲೋಕದ ಜನರ ಸಹಾಯವಿಲ್ಲದೆಯೇ ನಿನಗೆ ಮೊದಲಿದ್ದ ವಿಶಿಷ್ಟ ಶಕ್ತಿಗಳನ್ನು ನೀನೀಗ ಮತ್ತೆ ಪಡೆಯಬೇಕಾಗಿದೆ. ಅಷ್ಟೇ ಅಲ್ಲ ಅದಕ್ಕಿಂತಲೂ ಹೆಚ್ಚಿನ ಶಕ್ತಿಗಳನ್ನು ಪಡೆಯಬಹುದು. ಜ್ಞಾನಿಯಾದವನು ಪವಾಡಗಳನ್ನು ಮಾಡುವುದು ಸರಿ ಅಲ್ಲ. ಆದರೆ ಈ ದಿನ ನಮ್ಮ ಲೋಕದ ಜನರ ಶಕ್ತಿಯ ಆಳ ಎಷ್ಟು ಕಡಿಮೆಯದು ಎಂಬುದನ್ನು ತೋರಿಸುವ ಸಂದರ್ಭ ಒದಗಿ ಬಂದಿದೆ. ಇದು ದೇವರ ಇಚ್ಛೆ

ಯೆಂದೇ ಕಾಣುತ್ತದೆ '. ಜ್ಞಾನಿಗಳ ಕಣ್ಣುಗಳು ಹೊಳೆಯತೊಡಗಿದವು. ಅವರ ಮುಖವು ಸೂರ್ಯನಂತೆ ತೇಜಸ್ಸನ್ನು ತುಂಬಿಕೊಳ್ಳತೊಡಗಿತು. ಇದುವರೆಗೆ ಜ್ಞಾನ ಮುದ್ರೆಯಲ್ಲಿ ಕಣ್ಣು ಮುಚ್ಚಿ ಕುಳಿತ ಯೋಗಿಗಳು ನಿಧಾನಕ್ಕೆ ಕಣ್ಣು ತೆರೆದರು. ಅವರ ಕಣ್ಣಿನಿಂದ ಕಿಡಿಗಳು ಹೊರಬರುತ್ತಿರುವಂತೆ ಕಾಣುತ್ತಿತ್ತು. ಪ್ರಶಾಂತನ ತಂಡದವರು ಈ ಅದ್ಭುತವನ್ನು ಕಂಡು ಬೆಕ್ಕಸ ಬೆರಗಾಗಿ ನಿಂತಿದ್ದರು. ಒಂದು ಕಡೆ ನೂರು ಬಿಳಿಯ ಆಕೃತಿಗಳು ಇವರ ಮೇಲೆ ಬೀಳುವಂತೆ ಬರುತ್ತಿದ್ದರೆ ಇನ್ನೊಂದೆಡೆ ಮಹಾ ತಪಸ್ವಿಗಳ ಕಣ್ಣು ಮತ್ತು ಮುಖಗಳು ಬಂಗಾರ ವರ್ಣಕ್ಕೆ ತಿರುಗತೊಡಗಿದವು. ನಾಲ್ವರು ಯೋಗಿಗಳು ನಿಧಾನವಾಗಿ ಎದ್ದು ಜ್ಞಾನಿಯ ಅಕ್ಕಪಕ್ಕದಲ್ಲಿ ಕುಳಿತುಕೊಂಡರು. ರೆಪ್ಪೆಗಳನ್ನು ಬಡಿಯದೆ ತೆರೆದ ಕಣ್ಣಿನಿಂದ ಆ ಐವರೂ ಗುಹೆಯ ಬಾಗಿಲಿನತ್ತ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದರು. ಗಾಮಾನು ಅವರ ಮುಂದೆ ಕಣ್ಣು ಮುಚ್ಚಿ ಭಗವಂತನನ್ನು ನೆನೆಯುತ್ತ ಕುಳಿತಿದ್ದ. ಪ್ರಶಾಂತನ ತಂಡದವರು ಎರಡು ಶಕ್ತಿಗಳ ಮಧ್ಯ ಸಿಲುಕಿಕೊಂಡು ತಾವು ಸತ್ತು ಹೋಗುತ್ತೇವೆಂದು ಭಾವಿಸಿದ್ದರು. ಬರುತ್ತಿದ್ದ ಆಕೃತಿಗಳು ನಿಧಾನವಾಗಿ ಗುಹೆಯನ್ನು ಸುತ್ತುವರೆದು ಸ್ವಲ್ಪ ಅಂತರದಲ್ಲಿ, ಆದರೆ ಸರಸ್ವತಿಯನ್ನು ಕಟ್ಟಿದ ಮರದ ಹಿಂಬದಿಯಲ್ಲಿ ನಿಂತುಕೊಂಡರು. ಈಗ ಬೆಳಕು ಎಷ್ಟು ಪ್ರಖರವಾಗಿತ್ತೆಂದರೆ ಕಣ್ಣನ್‌ನಿಗೆ ರೀಟಾ ಮತ್ತು ಚಂಡೀದಾಸರು ಮರಗಳ ಹಿಂಭಾಗದಲ್ಲಿರುವುದು ಗೊತ್ತಾಗಿ ಹೋಯಿತು. ಚಂಡೀದಾಸ ಮತ್ತು ರೀಟಾರಿಗೆ ಅಪಾಯದ ಅರಿವು ಉಂಟಾಯಿತು. ಅವರಿಬ್ಬರೂ ಏಕ ಕಾಲದಲ್ಲಿ ಕಣ್ಣನ್‌ನ ಮೇಲೆ ಬಿದ್ದರು. ಚಂಡೀದಾಸನು ಕಣ್ಣನ್‌ನನ್ನು ನೋಡಿಕೊಳ್ಳುತ್ತಿರುವಾಗ ರೀಟಾಳು ಸರಸ್ವತಿಯ ಬಂಧನವನ್ನು ಬಿಚ್ಚಿ ಅವಳೊಡನೆ ನೇರವಾಗಿ ಗುಹೆಯತ್ತ ಓಡತೊಡಗಿದಳು. ಇದನ್ನೆಲ್ಲಾ ಸ್ಪಷ್ಟವಾಗಿ ನೋಡುತ್ತಿದ್ದ ಜಾರ್ಜನು ಅವರನ್ನು ರಸ್ತೆಯ ಮಧ್ಯದಲ್ಲಿಯೇ ತಡೆಯಲು ಓಡತೊಡಗಿದನು. ಆದರೆ ಗುಂಡಪ್ಪನು ಆತನ ಬೆನ್ನ ಹಿಂದೆಯೇ ಓಡಿ ಆತನ ಕಾಲುಗಳನ್ನು ಎಳೆದುಬಿಟ್ಟನು. ಕೂಡಲೇ ಆಕಾಶದಿಂದ ಎಂಬಂತೆ ಧ್ವನಿಯೊಂದು ತೂರಿಬಂದಿತು, 'ಯಾರೂ ನಿಂತ ಸ್ಥಳ ಬಿಟ್ಟು ಕದಲಕೂಡದು. ಕದಲಿದವರು ಸುಟ್ಟು ಬೂದಿಯಾಗುತ್ತೀರಿ, ಹೀಗೆ'

ಎಂದು ಆ ಧ್ವನಿಯು ತನ್ನ ಮಾತನ್ನು ಮುಗಿಸುವಷ್ಟರಲ್ಲಿ ಜಾರ್ಜ್ ಮತ್ತು ಗುಂಡಪ್ಪನು ಬಿದ್ದ ಸ್ಥಳದ ಪಕ್ಕದಲ್ಲಿದ್ದ ಮರವೊಂದು ಸುಟ್ಟು ಬೂದಿಯಾಗಿ ನಾಮಾವಶೇಷವಾಯಿತು. ಕಣ್ಣನ್‌ನನ್ನು ಹಿಡಿದುಕೊಂಡಿದ್ದ ಚಂಡೀದಾಸ ಮತ್ತು ಜಾರ್ಜನ ಕಾಲಿಗೆ ಅಂಟಿಕೊಂಡಿದ್ದ ಗುಂಡಪ್ಪ ಮತ್ತು ಇತರರು ಈ ದೃಶ್ಯವನ್ನು ನೋಡಿ ಸ್ತಬ್ಧ ಚಿತ್ರಗಳಂತೆಯೇ ನಿಂತಲ್ಲಿಯೇ ನಿಂತುಬಿಟ್ಟರು. ಬೆಳಕಿನ ಆಕೃತಿಗಳಿಂದ ನಾಲ್ವರು ಬೇರೆಯಾಗಿ ನಿಧಾನಕ್ಕೆ ಗುಹೆಯತ್ತ ಬರ ತೊಡಗಿದರು. ನಾಲ್ವರು ಯೋಗಿಗಳ ಮತ್ತು ಯೋಗಿಗಳ ಕಣ್ಣುಗಳು ಈಗ ಇನ್ನಷ್ಟು ಪ್ರಖರವಾಗಿ ಬೆಂಕಿಯ ಉಂಡೆಯಂತೆ ಕಾಣಿಸುತ್ತಿದ್ದವು. ಆ ನಾಲ್ಕು ಆಕೃತಿಗಳು ಗುಹೆಯ ಬಾಗಿಲಿನ ಬಳಿ ಬಂದು ಹೇಳಿದವು, 'ಗಾಮಾ ನಮ್ಮೊಡನೆ ಹೊರಟು ನಡೆ. ಈ ಲೋಕದ ಜನರ ಬುದ್ಧಿಯ ಸಾಮರ್ಥ್ಯವನ್ನು ನಾವು ಒಪ್ಪಿಕೊಳ್ಳಲಾರೆವು. ದೇವರನ್ನು ಅರಿಯಬಯಸುವ ನಿನ್ನ ಸಿದ್ಧಾಂತದಲ್ಲಿ ನಮಗೆ ನಂಬಿಕೆ ಇಲ್ಲ. ಇಲ್ಲದ ದೇವರನ್ನು ಹುಡುಕುವ ನಿನ್ನ ಪ್ರಯತ್ನ ವ್ಯರ್ಥ ಪ್ರಯತ್ನ. ನಿನ್ನ ಎದುರು ಕುಳಿತಿರುವ ಆ ಪ್ರಖರ ಕಣ್ಣುಗಳ ಮಾನವನೂ ನಮ್ಮ ಲೋಕದವನೇ. ಆತನನ್ನು ಕರೆದುಕೊಂಡು ಬರುವುದು ನಿನ್ನ ಕರ್ತವ್ಯವಾಗಿದೆ'. ಆ ನಾಲ್ವರಲ್ಲಿ ಯಾರು ಈ ಮಾತುಗಳನ್ನು ಆಡಿದರು ಎಂದು ಗೊತ್ತಾಗಲಿಲ್ಲ. ಆದರೆ ಜ್ಞಾನಿ ಬಿರುಗಣ್ಣು ಬಿಟ್ಟು ಆಕೃತಿಗಳನ್ನು ನೋಡುತ್ತಾ ಹಾಗೆಯೇ ಕುಳಿತರು. ಗಾಮಾನು ಕಣ್ಣು ಮುಚ್ಚಿಕೊಂಡು ತದೇಕಚಿತ್ತನಾಗಿ ಕುಳಿತುಕೊಂಡಿದ್ದ. ಕೆಲ ನಿಮಿಷದ ನಂತರ ಬೆಳಕಿನ ಆ ನಾಲ್ಕು ಆಕೃತಿಗಳೂ ಗುಹೆಯತ್ತ ಬರತೊಡಗಿದವು. ಪ್ರಶಾಂತನ ತಂಡದವರು ಆಕೃತಿಗಳ ಆಜ್ಞೆಯಂತೆ ದೂರ ಸರಿದು ನಿಂತರು. ಆಕೃತಿಗಳು ಇನ್ನೇನು ಗುಹೆಯನ್ನು ಪ್ರವೇಶಿಸುತ್ತವೆ ಎನ್ನುತ್ತಿರುವಾಗ ಒಮ್ಮೆಲೇ ಅವುಗಳ ಹೊರಭಾಗದಲ್ಲಿ ತೀವ್ರವಾದ ಬೆಂಕಿಯು ಕಾಣಿಸಿ ಕೊಂಡಿತು. ಗಾಬರಿಯಿಂದ ಎಂಬಂತೆ ಆ ನಾಲ್ಕು ಆಕೃತಿಗಳು ಹಿಮ್ಮೆಟ್ಟಿ ದವು. ಆದರೆ ಆ ಆಕೃತಿಗಳಲ್ಲಿ ಒಂದು ಆಕೃತಿಯು ವಾಯುವೇಗದಿಂದ ಬೆಟ್ಟದ ತುದಿಯಲ್ಲಿಯ ತನ್ನ ತಟ್ಟೆಗೆ ಹೋಗಿ ಒಂದು ಉಪಕರಣವನ್ನು ತಂದಿತು. ಅದರಿಂದ ಲೇಸರ್ ಕಿರಣದಂತಹ ಹಸಿರು ಬಣ್ಣದ ಕಿರಣಗಳು ಹೊರಬರುತ್ತಿ ದ್ದವು. ಗುಹೆಯತ್ತ ಆ ಸಾಧನವನ್ನು ಮುಂದೆ ಮಾಡಿ ಕಿರಣಗಳನ್ನು ಬಿಡ

ಲಾಯಿತು. ಆದರೆ ಕಿರಣಗಳು ಗುಹೆಯನ್ನು ಪ್ರವೇಶಿಸಧಾದವು. ಈಗ ಜ್ಞಾನಿಗಳು ಹೇಳಿದರು, 'ಬಹಳ ಅಪಾಯವಿದೆ. ಹೊರಗಿನ ಮಾನವ ಜೀವಿಗಳೇ ಹೊರಟು ಹೋಗಿರಿ'. ಏಕಕಾಲದಲ್ಲಿ ಹತ್ತು ಸಿಡಿಲುಗಳು ಎರಗಿ ದಂತೆ ಈ ಧ್ವನಿ ಬಂದಿತು. ಪ್ರಶಾಂತ ಮತ್ತು ತಂಡದವರು ಜ್ಞಾನಿಗಳ ಮಾತನ್ನು ಅನುಸರಿಸಿ ಕಾಲು ಕಿತ್ತಿದರು. ಬೆಂಕಿ ತಗಲಬಹುದೆಂಬ ಭಯ ಅವರಿಗಿದ್ದೇ ಇತ್ತು. ಆದರೆ ಜ್ಞಾನಿಗಳ ಆಜ್ಞೆಯ ನಂತರ ಅಂತಹ ಸಂಭವವೇ ಇರಲಿಲ್ಲ. ಜಾರ್ಜ್ ಮತ್ತು ಕಣ್ಣನ್ ಮಾತ್ರ ನಿಧಿಯ ಆಸೆಯಿಂದ ಅಲ್ಲಿಯೇ ಪೊದೆಗಳ ಹಿಂದೆ ಅಡಗಿ ಕುಳಿತರು.

ಬೆಳಕಿನ ರೂಪದ ಆಕೃತಿಗಳು, 'ಲೋಕಕರ್ತೃ' ಮತ್ತು ಅವನ ಸಂಗಡಿಗರು, ಬೆಳಕಿನ ರೂಪದಲ್ಲಿದ್ದ ಶಾಂತಲಾ, ವೀರೇಂದ್ರ ಮತ್ತು ಗುರ ಇವರೆಲ್ಲಾ ಹತಾಶರಾಗಿದ್ದರು.

## ೩೨

ಬೆಳಕಿನ ಆಕೃತಿಗಳು ನಿಧಾನವಾಗಿ ಮತ್ತೆ ಕಬ್ಬಿಣದ ಬೆಟ್ಟದ ತುದಿ ಯತ್ತ ಸಾಗಿದವು. ಪ್ರಶಾಂತ ಮತ್ತು ಆತನ ತಂಡದವರು ಹೆದರುತ್ತಾ ವೇಗವಾಗಿ ಬೆಟ್ಟವನ್ನು ಏರಲು ಪ್ರಾರಂಭಿಸಿದರು. ಅಪಾಯವು ಮುಗಿಯಿತು ಎಂದು ಅವರು ಅಂದುಕೊಂಡಿದ್ದರು. ಆದರೆ ಬೆಳಕಿನ ರೂಪದ ಆಕೃತಿಗಳು ತಮ್ಮ ತಟ್ಟೆಯನ್ನು ತಲುಪಿದೊಡನೆ ಎರಡು ಬೃಹದಾಕಾರದ ತಿರುಗುವ ಚಕ್ರ ಗಳನ್ನು ತಟ್ಟೆಯಿಂದ ಬೇರ್ಪಡಿಸಿ ಹೊರತೆಗೆದವು. ಅವು ಗಾತ್ರದಲ್ಲಿ ಕಬ್ಬಿಣದ ಬೆಟ್ಟದ ತುದಿಯ ಎರಡರಷ್ಟಿದ್ದವು. ಆ ಚಕ್ರಗಳು ತಾವೇ ತಾವಾಗಿ ಅಂತರ ದಲ್ಲಿ ಗಾಳಿಯಲ್ಲಿ ತಿರುಗುತ್ತಾ ಕಬ್ಬಿಣದ ಬೆಟ್ಟದ ಚಾಚಿದ ವಿಶಾಲ ಭಾಗವನ್ನು ಕೊರೆಯತೊಡಗಿದವು. ತಟ್ಟೆಯೊಂದಿಗೆ ಆಕೃತಿಗಳು ಚಿಕ್ಕ ಬೆಟ್ಟದತ್ತ ಹೋಗಿ ಅಲ್ಲಿ ಇಳಿದವು. ಬೆಟ್ಟವು ತಾನೇ ತಾನಾಗಿ ಅದುರುವುದಲ್ಲದೇ ದೊಡ್ಡ ದೊಡ್ಡ ಬಂಡೆಗಳು ಮತ್ತು ಕಬ್ಬಿಣದ ಅದಿರುಗಳು ಕೊಳ್ಳದಲ್ಲಿ ಬೀಳ ತೊಡಗಿದವು. ಈ ವೇಳೆಗಾಗಲೇ ಪ್ರಶಾಂತನ ತಂಡದವರು ಮುಕ್ಕಾಲು ಭಾಗ ದಾರಿಯನ್ನು ಕ್ರಮಿಸಿಬಿಟ್ಟಿದ್ದರು. ಬೆಟ್ಟವು ಬೀಳುತ್ತದೆಂದು ತಿಳಿ

ದೊಡನೆ ಅವರು ತಮ್ಮ ಎಡಬದಿಗೆ ಓಡತೊಡಗಿದರು. ಇದರಿಂದ ಕೆಳಗೆ ಬೀಳುತ್ತಿದ್ದ ಬಂಡೆಗಳಿಂದ ರಕ್ಷಿಸಿಕೊಳ್ಳಲು ಅವರಿಗೆ ಸಹಾಯವಾಯಿತು. ಕಣಿವೆಯ ಆಳದಲ್ಲಿ ಬಂಡೆಗಳು ಘೋರ ಸಪ್ಪಳವನ್ನು ಮಾಡುತ್ತಾ ಗುಹೆಯ ಎದುರು ಬಂದು ಬೀಳತೊಡಗಿದವು. ಈ ದೃಶ್ಯವನ್ನು ನೋಡುತ್ತಾ ಜ್ಞಾನಿ ಮತ್ತು ಯೋಗಿಗಳು ಕುಳಿತಿದ್ದರು. ಇದಾವುದರ ಪರಿವೆಯು ಇಲ್ಲದವನಂತೆ ಗಾಮಾನು ಧ್ಯಾನದಲ್ಲಿ ಮುಳುಗಿದ್ದ. ಕಾಲ ಮೀರಿದ ಮೇಲೆ ಅಪಾಯವನ್ನು ಅರಿತ ಜಾರ್ಜ್ ಮತ್ತು ಕಣ್ಣನ್ ಮೇಲೆ ಓಡತೊಡಗಿದರು. ಆದರೆ ಈ ವೇಳೆಗಾಗಲೇ ಕಣಿವೆಯಲ್ಲಿ ಬಂಡೆಗಳ ರಾಶಿಯೇ ಬಂದು ಬೀಳತೊಡಗಿತ್ತು. ಆಕಾಶವೇ ಬಿರಿದು ಬೀಳುವಂತೆ ಭಾಸವಾಗುತ್ತಿದ್ದ ಬಂಡೆಗಳ ಮಧ್ಯೆ ಆ ಕದೀಮರಿಬ್ಬರೂ ಸಿಕ್ಕುಹಾಕಿಕೊಂಡರು. ನಿಂಗನ ಸಮಾಧಿಯ ಬಳಿಯಲ್ಲಿಯೇ ಇವರಿಬ್ಬರ ಸಮಾಧಿಯೂ ಬಂಡೆಗಳ ಕೆಳಗೆ ಆಯಿತು. ಮೇಲೆ ಓಡುತ್ತಿದ್ದ ಚಂಡೀದಾಸನು ಮಾತ್ರ ಉಳಿದ ಇಬ್ಬರು ಕದೀಮರನ್ನು ಬಂಧಿಸುವ ಯೋಚನೆಯಲ್ಲಿಯೇ ಇದ್ದ. ನಿಧಿಯ ಆಸೆಯಿಂದ ಬಂದ ಜಾರ್ಜನು ಮಾಡಿದ ಪ್ರಯತ್ನವೆಲ್ಲಾ ಇದ್ದಿಲು ಉದಿರುವಂತಾಗಿ ಕೊನೆಗೆ ದೈವವು ಅವನನ್ನು ಸತ್ತ ಸುಣ್ಣವನ್ನಾಗಿ ಮಾಡಿರಬಹುದೆಂಬ ಅರಿವು ಚಂಡೀದಾಸನಂಥವರಿಗೆ ಬರಲು ಸಾಧ್ಯವಿರಲಿಲ್ಲ.

ಬೀಳುತ್ತಿದ್ದ ಬಂಡೆಗಳು ಗುಹೆಯ ಬಾಗಿಲನ್ನು ಮುಚ್ಚಿ ಗುಹೆಯು ಆ ಕೊಳ್ಳದಲ್ಲಿ ಹೂತು ಹೋಗುವಂತೆ ಮಾಡಿದುವು. ಅನ್ಯಲೋಕ ಜೀವಿಗಳಾದ ಬೆಳಕಿನ ಆಕೃತಿಗಳು ತಮ್ಮ ವಿಜ್ಞಾನದ ಪ್ರಕಾರ ಪ್ರಾಣವಾಯುವಿನ ಅಭಾವದಿಂದ ಗುಹೆಯಲ್ಲಿಯ ಜೀವಿಗಳೆಲ್ಲಾ ಮರಣ ಹೊಂದುತ್ತಾರೆಂದು ಭಾವಿಸಿದ್ದರು. ಆದರೆ ಪ್ರಾಣದ ಒಟ್ಟು ರಹಸ್ಯವನ್ನು ಅರಿತಿದ್ದ ಜ್ಞಾನಿ ಮತ್ತು ಯೋಗಿಗಳು ಆ ರಹಸ್ಯವನ್ನು ಗಾಮಾನಿಗೆ ಬೋಧಿಸಿದರು. ಹೊರ ಲೋಕದ ಸಂಪರ್ಕವಿಲ್ಲದೇ ಆ ಆರು ಜನರು ಮತ್ತೆ ಧ್ಯಾನದ ಭಂಗಿಯಲ್ಲಿ ಕುಳಿತರು. ಚಂದರಸನ ಸಮಾಧಿಯಲ್ಲಿ ಈಗ ವಜ್ರ ವೈಡೂರ್ಯ ರತ್ನಖಚಿತ ಆಭರಣಗಳು ಹೊಳೆಯುತ್ತಿದ್ದವು.

ಬೆಟ್ಟವನ್ನು ಏರಿ ಮೇಲಿನ ಭಾಗವನ್ನು ತಲುಪಿದಾಗ ಬೆಳಗಿನ ಜಾವ ಐದು ಗಂಟೆಯಾಗಿತ್ತು. ಹಿಂತಿರುಗಿ ಕೂಡ ನೋಡಲು ಆಗದೆ ಈ ದಾರಿ

ಯನ್ನು ಪ್ರಶಾಂತನ ತಂಡದವರು ಕ್ರಮಿಸಿದ್ದರು. ಮೇಲಿನ ಭಾಗವನ್ನು ತಲುಪಿದೊಡನೆ ಹೆದ್ದಾರಿಯ ಅಂಚಿನಲ್ಲಿ ನಿಂತು ಕಣಿವೆಯಲ್ಲಿ ಇಣಿಕಿದರು. ಇಡೀ ಕಣಿವೆಯೇ ಬಂಡೆಗಲ್ಲಿನಿಂದ ತುಂಬಿಹೋಗಿತ್ತು. ಚಿಕ್ಕ ಬೆಟ್ಟದಲ್ಲಿ ಹಾರುವ ತಟ್ಟೆಗಳು ಶಬ್ದವನ್ನು ಮಾಡುತ್ತಾ ನಿಧಾನಕ್ಕೆ ಮೇಲೇರತೊಡಗಿದ್ದವು. ಶಾಂತಲಾ, ಗುರು ಮತ್ತು ವೀರೇಂದ್ರರಿಗೆ ಕೊನೆಗೂ ಗಾಮಾನ ಅಸ್ತಿತ್ವವನ್ನು ಅಳಿಸಿದ ತೃಪ್ತಿಯು ಹಾರುವ ತಟ್ಟೆಗಳಲ್ಲಿ ಕುಳಿತು ನಮ್ಮ ಲೋಕಕ್ಕೆ ತೆರಳುವಾಗ ಇತ್ತು. 'ಲೋಕಕರ್ತೃ'ವಿಗೆ ವಿಫಲತೆಯ ಅನುಭವವಾದರೂ ಬೆಟ್ಟ ಕೊರೆದು ಗಾಮಾನ ಹುಟ್ಟನ್ನು ಅಡಗಿಸಿದ ಸಮಾಧಾನವಿತ್ತು.

'ಪಾಪ! ಗಾಮಾ ಬೆಟ್ಟದ ಕೆಳಗೆ ಸಿಕ್ಕು ಸತ್ತುಹೋದ' ಎಂದು ಚಂಡೀದಾಸನು ದುಃಖದಲ್ಲಿ ಹೇಳಿದ.

ಪ್ರಶಾಂತ, ಗುಂಡಪ್ಪ ರೀಟಾ ಮೌನವಾಗಿದ್ದರು.

'ಕದೀಮರಿಬ್ಬರೂ ಸತ್ತಿರಬಹುದು. ಆದರೆ ಗಾಮಾ ಜ್ಞಾನಿಯ ಸಂಗದಲ್ಲಿದ್ದಾನೆ. ಕಣ್ಣಿಗೆ ಕಾಣದ್ದನ್ನು ತಿಳಿದುಬರುತ್ತಾನೆ. ಆತನೊಡನೆ ಇರಲಾರದ ನಾನೇ ಅಭಾಗ್ಯಳು' ಎಂದಳು ಸರಸ್ವತಿ.

'ಇಂಥ ವಿಷಯಗಳಲ್ಲಿ ಒಂದು ಮಿತಿ ಇರಬೇಕು ಗಾಮಾನೊಡನೆ

ನೀವೂ ಇದ್ದರೆ ಅವನೊಡನೆ ಆ ಬಂಡೆಗಳ ಕೆಳಗೆ ನಿಮ್ಮ ಸಮಾಧಿಯೂ ಆಗುತ್ತಿತ್ತು'. ಎಂದಳು ರೀಟಾ.

ಈ ಮಾತಿಗೆ ಸರಸ್ವತಿಯು ಉತ್ತರ ಕೊಡಲಿಲ್ಲ.

'ನರಸಿಂಹಮೂರ್ತಿಗಳನ್ನು ಅಪಹರಿಸಿದ ಗಾಮಾನಿಗೆ ನೀವು ಸಹಾಯ ಮಾಡಿದ್ದೀರಿ. ಆದ್ದರಿಂದ ಸರಸ್ವತಿ ಯು ಆರ್ ಅಂಡರ್ ಅರೆಸ್ಟ್' ಎಂದ ಚಂಡೀದಾಸ. ನರಸಿಂಹಮೂರ್ತಿಗಳು ಗಹಗಹಿಸಿ ನಗತೊಡಗಿದರು. ನಗುವಿನ ಅಲೆಗಳು ನಿಂತ ಮೇಲೆ ಹೇಳಿದರು, 'ಇರಲಿ ಬಿಡಿ ಮಿಸ್ಟರ್ ಚಂಡೀದಾಸ್. ಅವಳಿಂದಾಗಿಯೇ ನನಗೆ ಇಷ್ಟು ಮಹತ್ವದ ಅನುಭವಗಳು ಆಗಿವೆ. ಮೇಲಾಗಿ ಶಿವನ್ನಾಭಟ್ಟನ ದಾಖಲೆಗಳು ಸುಳ್ಳೆಂದು ಸಾಬೀತಾಯಿತು. ಈ ಕುರಿತು ನನ್ನ ವಿದ್ಯಾರ್ಥಿಗಳಲ್ಲಿ ಯಾರಾದರೂ ಒಬ್ಬರು ರಿಸರ್ಚ್ ಮಾಡಿ ಡಾಕ್ಟರೇಟ್ ಪಡೆಯಲು ಅನುಕೂಲವಾಯಿತು. ಗಾಮಾ ಮತ್ತು ಸರಸ್ವತಿಯೊಡನೆ ನಾನೇ ಸ್ವಮನಸ್ಸಿನಿಂದ ಹೋಗಿದ್ದೆ ಎಂದು ಬೆಂಗಳೂರು ತಲುಪಿದೊಡನೆ

ಹೇಳಿಕೊಡುತ್ತೇನೆ'. ಇವರು ಇಷ್ಟು ಮಾತನಾಡುತ್ತಿದ್ದಂತೆ ತಟ್ಟೆಗಳು ಹಾರಿದ ಸ್ಥಳದಲ್ಲಿ ಆಕೃತಿಯೊಂದು ಅವರಿಗೆಲ್ಲಾ ಕಂಡಿತು. ದೂರದರ್ಶನದಿಂದ ಅವರು ನೋಡಿದರು. ಹೆಗಲ ಮೇಲೆ ಹೆಬ್ಬಾವನ್ನು ಇಳಿಬಿಟ್ಟುಕೊಂಡು ಸನ್ಯಾಸಿಯು ನಡೆದಿದ್ದ. ಚಂಡೀದಾಸ, ನರಸಿಂಹಮೂರ್ತಿಗಳು, ಮತ್ತು ಶಿವಾಜಿ ಜೀಪಿನಲ್ಲಿ ಬೆಂಗಳೂರಿನತ್ತ ನಡೆದರು.

ಪ್ರಶಾಂತ, ಗುಂಡಪ್ಪ ಮತ್ತು ರೀಟಾ ತಮ್ಮ ಕಾರಿನಲ್ಲಿ ಮೈಸೂರು ತಲುಪಲು ಸಾಗಿದರು.

ಆಯ ತಪ್ಪಿದ ದೋಣಿಯಂತೆ ಸರಸ್ವತಿಯು ಗಾಮಾಸ ಕಾರಿನಲ್ಲಿ ಹೊರಟಳು.

ಮೈಸೂರನ್ನು ತಲುಪಿದೊಡನೆ ಜೋಲ್ಟ್ ಆಫೀಸಿನಲ್ಲಿ ಶಿವಯ್ಯ ನಗುನಗುತ್ತಾ ಪ್ರಶಾಂತ ಮತ್ತು ಇತರರನ್ನು ಬರಮಾಡಿಕೊಂಡ. 'ಅವರು ದೆವ್ವ ಅಲ್ಲ ಅಲ್ಲವೇ ಸಾರ್'? ಎಂದು ಕೇಳಿದ.

ಮೂವರೂ ಮೌನವಾಗಿದ್ದರು.

—o—



